ಕರ್ನಾಟಕದಲ್ಲಿ

# ಹಣ್ಣಿನ ತೋಟಗಳು

ಭಾಗ ೧



ಕನ್ನಡ ನಾಡಮ್ಮಾ,
ನಿನ್ನಡಿದಾವರೆಗಿದು ಅಮ್ಮಾ ।
ಮುನ್ನನೆ ಎನ್ನಯ ನುಡಿಯನು ಪೆರ್ಚಿಸಿ,
ಸನ್ನುತ ತಾಯ್ನುಡಿ ಸೇವೆಯ ಕೊಳ್ಳಾ ॥

ಶಂಭು ಶಂಭು ಭಟ್ಟ, ಎಮ್. ಏಜಿ.

ಮುಂಬಯಿ ಇ॥ ಬೇಸಾಯ ಖಾತೆಯ ಡಾಯರೆಕ್ಟರರಿಂದ ಮಂಜೂರಾಗಿದೆ.

---

॥ ಶ್ರೀ ॥

ಕರ್ನಾಟಕದಲ್ಲಿ

# ಹಣ್ಣಿನ ತೋಟಗಳು

ಭಾಗ ೧


ಲೇಖಕರು.

**ಶಂಭು ಶಂಭು ಭಟ್ಟ**, ಎಮ್. ಏಜಿ.

ಹಣ್ಣುಹಂಪಲಗಳ ಬಾಗಾಯತವು, ಒಕ್ಕಲಿಗರ ಕೈಪಿಡಿ ಮುಂತಾದವುಗಳ
ಲೇಖಕರು, ಗವ್ಹರ್ನಮೆಂಟ ಹಾರ್ಟಿಕಲ್ಚರಿಸ್ಟರ
ಸಹಾಯಕರು ಇತ್ಯಾದಿ;
ಗಣೇಶಖಿಂಡ ಬೊಟೇನಿಕಲ್ ಗಾರ್ಡನ್ಸ್, ಖಡಕಿ, ಪುಣೆ.


---

ಮುನ್ನುಡಿಯನ್ನು ಬರೆದವರು:

**ಮೆ॥ ಎಸ್. ಎಸ್. ಸಾಲೀಮಠ, ಬಿ. ಏಜಿ.**

ಡೆಪ್ಯೂಟಿ ಡಾಯರೆಕ್ಟರ್ ಆಫ್ ಎಗ್ರಿಕಲ್ಚರ,
ದಕ್ಷಿಣಭಾಗ, ಧಾರವಾಡ.

---



---


ಮೊದಲನೇ ಆವೃತ್ತಿ—೫೦೦ ಪ್ರತಿಗಳು

೧೯೩೨

ಬೆಲೆ ಒಂದು ರೂಪಾಯಿ.

ಮುದ್ರಕರು
ಶ್ರೀ ಅನಂತ ವಿನಾಯಕ ಪಟವರ್ಧನ, ಬಿ. ಎ.,
ಆರ್ಯಭೂಷಣ' ಮುದ್ರಾಲಯ, ಭಾಂಬುರ್ಡಾ ಪೇಠ,
ಮನೆ ನಂ. ೯೩೮/೨, ಪುಣೆ ನಂ. ೪

ಪ್ರಕಾಶಕರು·
ಶ್ರೀ ಶಂಭು ಶಂಭು ಭಟ್ಟ, ಎಮ್. ಎಜ,
ಗಣೇಶಖಿಂಡ ಬೊಟೇನಿಕಲ್ ಗಾರ್ಡನ್ಸ್, ಖಡಕಿ, ಪುಣೆ ನಂ. ೩

ಕನ್ನಡಿಗರಲ್ಲಿ ಮುಂಬಯಿ ಇಲಾಖೆಯ ಬೇಸಾಯ ಖಾತೆಯ ಪ್ರಥಮ
ಮಂತ್ರಿಗಳಾದ ನಾಮದಾರ ದಿವಾನ್ ಬಹದ್ದೂರ
**ಸಿದ್ಧಪ್ಪಾ ತೋಟಪ್ಪಾ ಕಂಬಳಿ,** ಬಿ. ಎ., ಎಲ್‌ಎಲ್. ಬಿ.
ಯವರು:



"'ಕರ್ನಾಟಕದಲ್ಲಿ ಹಣ್ಣಿನ ತೋಟಗಳು' ಎಂಬ ಅತ್ಯುತ್ತಮ ಪುಸ್ತಕವನ್ನು ಕನ್ನಡದಲ್ಲಿ ಬರೆದದ್ದಕ್ಕಾಗಿ ನಾನು ಶ್ರೀ। ಭಟ್ಟರನ್ನು ಅಭಿನಂದಿಸುತ್ತೇನೆ."

—ಸಿದ್ಧಪ್ಪಾ ತೋಟಪ್ಪಾ ಕಂಬಳಿ

# ಮುನ್ನುಡಿ

ನಮ್ಮ ಕನ್ನಡ ಭಾಷೆಯಲ್ಲಿ ಬೇಸಾಯದ ಮೇಲೆ ಬರೆದ ಪುಸ್ತಕಗಳು ತೀರ ಕಡಿಮೆ. ಅದರಲ್ಲಿಯೂ ಹಣ್ಣಿನ ತೋಟಗಳ ವಿಷಯವಾಗಿ ಬರೆದವರೆಂದರೆ ಇವರೇ ಮೊದಲನೆಯವರೆಂದರೆ ತಪ್ಪಾಗಲಾರದು. ನಮ್ಮ ಕರ್ನಾಟಕವು ಹಣ್ಣಿನ ಸಾಗುವಳಿಗೆ ಅನುಕೂಲವಿದ್ದು ನಾವು ಹಣ್ಣನ್ನು ದೂರಿನಿಂದ ತರಿಸಿ ತಿನ್ನುತ್ತಿರುವ ಕಾರಣವು ಮುಖ್ಯವಾಗಿ ನಮ್ಮ ಅಜ್ಞಾನವೆಂದು ಹೇಳಬಹುದು. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಜಾತಿಯ ಹಣ್ಣಿನ ಗಿಡಗಳ ಸಾಗುವಳಿಗೆ ಹೆಚ್ಚು ಅನುಕೂಲತೆಗಳಿದ್ದು, ಅವುಗಳನ್ನು ವಿಸ್ತಾರವಾಗಿ ಎಲ್ಲ ಜನರಿಗೂ ತಿಳಿಯುವಂತೆ ಗ್ರಂಥಕರ್ತರು ಈ ತಮ್ಮ ಚಿಕ್ಕ ಪುಸ್ತಕದಲ್ಲಿ ಉಲ್ಲೇಖಿಸಿರುವರು. ಇವರು ಒಕ್ಕಲತನದ ಕಾಲೇಜದಲ್ಲಿ ತೇರ್ಗಡೆಯನ್ನು ಹೊಂದಿ, ಒಕ್ಕಲತನದ ಖಾತೆಯ ಹಣ್ಣಿನ ಗಿಡಗಳ ಶಾಖೆಯಲ್ಲಿಯೇ ಬಹಳ ದಿವಸಗಳಿಂದ ಕೆಲಸಮಾಡುತ್ತಿರುವವರಿಂದ ಹೆಚ್ಚು ಅನುಭವಿಕರು ಇರುವರಲ್ಲದೆ, ಇವರು ನಮ್ಮ ಕನ್ನಡಿಗರಿದ್ದು ಕರ್ನಾಟಕದ ಭೂಮಿ ಹಾಗೂ ಹವೆಮಾನವನ್ನು ಅರಿತವರಿದ್ದು ಕಳಕಳಿಯಿಂದ ಒಕ್ಕಲಿಗರಿಗೆ ಹೆಚ್ಚು ಉಪಯುಕ್ತ ಸಂಗತಿಗಳನ್ನೇ ಈ ಪುಸ್ತಕದಲ್ಲಿ ವಿವರಿಸಿರುವರು. ಭಾಷೆಯು ಸುಲಭವಾಗಿದ್ದು ಸರ್ವಸಾಧಾರಣ ಓದು ಬರೆಯುವವರಿಗೆ ತಿಳಿಯುವಂತಿದೆ. ಮನುಷ್ಯರಿಗೆ ಹಣ್ಣು ಶ್ರೇಷ್ಠವಾದ ಆಹಾರವಿದ್ದು ನಾವು ಇದರ ಕಡೆಗೆ ಏನೂ ಲಕ್ಷ್ಯವಿತ್ತಿಲ್ಲವೆನ್ನಲಿಕ್ಕೆ ಸಂದೇಹವಿಲ್ಲ. ಹೆಚ್ಚು ಹಣ್ಣು ಬೆಳೆದು, ಅವು ಕರ್ನಾಟಕದ ಎಲ್ಲ ಜನರಿಗೂ ಸರ್ವಸಾಧಾರಣ ಸುಲಭವಾಗಿ ದೊರಕುವಂತೆಯೂ ಹಾಗೂ, ಅವುಗಳನ್ನು ಅತ್ತಿತ್ತ ಹೊರಗೆ ಕಳುಹಿಸಿ ಹೆಚ್ಚು ಲಾಭ ಪಡೆಯುವಂತೆಯೂ ಶ್ರಮಪಡುವದು ಅತ್ಯವಶ್ಯವಾಗಿದೆ. ಓದು ಬರೆಯುವ ಎಲ್ಲ ಕನ್ನಡಿಗರೂ ಈ ಪುಸ್ತಕವನ್ನು ಉಪಯೋಗಿಸಿ ಕರ್ನಾಟಕದಲ್ಲಿ ಹಣ್ಣಿನ ಸಾಗುವಳಿಯನ್ನು ಹೆಚ್ಚಿಸಲಿಕ್ಕೆ ಸಹಾಯ ಮಾಡಲಿಕ್ಕೆ ಬರುವಂತಿದೆ. ಇನ್ನೊಂದು ಮಹತ್ವವಾದ ಸಂಗತಿ ಏನಂದರೆ: ಈ ಗ್ರಂಥಕರ್ತರು ಸದ್ಯಕ್ಕೆ ಒಕ್ಕಲತನದ ಖಾತೆಯ ಹಣ್ಣಿನ ಶಾಖೆಯಲ್ಲಿಯೇ ಕೆಲಸ ಮಾಡುತ್ತಿರುವದರಿಂದ ಹಣ್ಣಿನ ಗಿಡಗಳನ್ನು ಹಚ್ಚಲಿಚ್ಛಿಸುವವರು ತಮಗೆ ಬೇಕಾದ ಹೆಚ್ಚಿನ ಮಾಹಿತಿಯನ್ನು ದೊರಕಿಸಿಕೊಳ್ಳಲಿಕ್ಕೆಯೂ, ಅವರನ್ನು ಬೇಕಾದಲ್ಲಿ ಕರೆಸಿಕೊಳ್ಳಲಿಕ್ಕೆಯೂ ಬರುವಂತಿದೆ. ಕಾರಣ ಎಲ್ಲರೂ ಈ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದು ನನ್ನ ಆಶೆ.

ಶಿ. ಶಿ. ಸಾಲೀಮಠ,
ಡೆಪ್ಯುಟಿ ಡಾಯರೆಕ್ಟರ ಆಫ್ ಎಗ್ರಿಕಲ್ಚರ,
ಧಾರವಾಡ.

ಮುಳವಾಡ,
೬-೧೦-೧೯೩೭

# ಶುದ್ಧಿ ಪತ್ರಿಕೆ:

| ಪಾನು | ವಳಿ | ಅಶುದ್ಧ | ಶುದ್ಧ |
|---|---|---|---|
| ೧ | ೨ | ಕರ್ಣಾಟಕವೆಂತಲೂ | ಕರ್ಣಾಟಕವೆಂತಲೂ |
| ೬ | ೭ | ಕ್ರಿತ್ತಳೀ | ಕಿತ್ತಳೀ |
| ೬ | ೨೯ | ಬೆಕೇ | ಬೇಕೇ |
| ೨೪ | ೨೮ | ಹಣುಗಳಿಗೆ | ಹಣ್ಣುಗಳಿಗೆ |
| ೩೫ | ೧೮ | ವೇುಲೆ | ಮೇಲೆ |
| ೩೮ | ೨೮ | ಕಟ್ಟಬೇಕು | ಕಟ್ಟಬೇಕು |
| ೩೮ | ೨೮ | ಕಟ್ಟಬೇಕು | ಕಟ್ಟಬೇಕು |
| ೪೧ | ೩ | ಅಳತೆಯವಿರಬೇಕು | ಅಳತೆಯುವಿರಬೇಕು |
| ೪೪ | ೬ | ಕಟ್ಟುವಾಗ | ಕಟ್ಟುವಾಗ |
| ೪೪ | ೧೧ | ವಡಕ್ಕೆ | ವದಕ್ಕೆ |
| ೪೫ | ೧೮ | ಆನುಸರಿಸಬೇಕಾದ | ಅನುಸರಿಸಬೇಕಾದ |
| ೫೭ | ೨೨ | ಶ್ರೆಷ್ಠ | ಶ್ರೇಷ್ಠ |
| ೬೪ | ೨೫ | ಕಟ್ಟಲಿಕ್ಕೆ | ಕಟ್ಟಲಿಕ್ಕೆ |
| ೬೬ | ೨೭ | ತಂಬಬೇಕು | ತುಂಬಬೇಕು |
| ೭೬ | ೨೪ | ಬಾಲದಿಯಲ್ಲಿ | ಬಾದಲಿಯಲ್ಲಿ |
| ೧೯ | ೧೮ | ಒಂದು ರೂಪಾಯಿ | ಎಂಟು ಆಣೆಗಳು |
| ,, | ೧೯ | ಎಂಟು-ಹತ್ತು | ಐದೂ ವರೆ |
| ೧೧೨ | ೨೯ | ಸವಾಗಿ | ಸಮನಾಗಿ |

# ಪ್ರಸ್ತಾವನೆ

**ಕನ್ನಡ** ನುಡಿಯಲ್ಲಿ ಒಕ್ಕಲತನದ ಮೇಲೆ ಬರೆದ ಪುಸ್ತಕಗಳು ಬಹಳ ಕಡಿಮೆ. ಒಕ್ಕಲತನದ ಒಂದು ಅಂಗವಾದ ತೋಟಗಳ ವಿಷಯವಾಗಿ ಬರೆದಂಥ ವಂತೂ ತೀರ ಕಡಿಮೆ. ಈ ನ್ಯೂನತೆಯನ್ನು ಕಂಡು ಬಹುಕಾಲದಿಂದ ನಾನು ಮರುಗುತ್ತಿದ್ದೇನೆ. ಇದನ್ನು ಹೋಗಲಾಡಿಸಲು ಕೈಲಾದಷ್ಟು ಪ್ರಯತ್ನ ಮಾಡ ಬೇಕೆಂದು ಕೆಲವು ವರ್ಷಗಳಿಂದ ಒಕ್ಕಲತನದ ವಿಷಯವಾಗಿ ಏನಾದರೊಂದು ಬರೆ ಯುತ್ತಿರುವೆನು. ಪುಣೆಯಂಥ ದೂರದ ಪ್ರದೇಶದಲ್ಲಿ ಉಳಿದು ಕರ್ನಾಟಕಸ್ಥರ ಸೇವೆಯನ್ನು ಮಾಡುವದು ನನಗೆ ಇನ್ನಾವ ತರದಿಂದಲೂ ಸಾಧ್ಯವಾಗಿ ಕಾಣಿಸ ಲಿಲ್ಲ. ಆದದರಿಂದ ಹಣ್ಣುಹಂಪಲಗಳನ್ನು ಬೆಳೆಸುವ ವ್ಯವಸಾಯದಲ್ಲಿ ತೀರ ಹಿಂದುಳಿದ ಮಾತೃಭೂಮಿಯಾದ ಕರ್ನಾಟಕದಲ್ಲಿ ಈ ವಿಷಯವಾಗಿ ಆದಷ್ಟು ಜಾಗ್ರತೆಯನ್ನುಂಟು ಮಾಡಲಿಕ್ಕೂ, ಕರ್ನಾಟಕ ಬಾಂಧವರಿಗೆ ನನ್ನ ಅಲ್ಪ ಜ್ಞಾನದ ಅತ್ಯಲ್ಪ ಉಪಯೋಗವನ್ನು ಮಾಡಿಕೊಡುವದಕ್ಕೂ ದೊರೆತ ಈ ಸುಸಂಧಿಯನ್ನು ಕಳಕೊಳ್ಳಬಾರದೆಂಬ ಉತ್ಕಟೇಚ್ಛೆಯ ಫಲವೇ ಈ ಚಿಕ್ಕ ಪುಸ್ತಕವಾಗಿದೆ.

ಇದನ್ನು ಕರ್ನಾಟಕಸ್ಥರ ಕಯ್ಯಲ್ಲಿಡುವಾಗ ಪುಸ್ತಕಗಳನ್ನು ಬರೆಯುವಾಗ ನನಗೊದಗಿದ ಕೆಲವು ತೊಂದರೆಗಳನ್ನೂ ನನ್ನ ಅಲ್ಪ ಅನುಭವವನ್ನೂ ಉಲ್ಲೇಖಿಸಿ ಅವುಗಳನ್ನು ದೂರಪಡಿಸಲು ಅತ್ಯವಶ್ಯವಾಗಿ ಬೇಕಾಗುವ ಕರ್ನಾಟಕಸ್ಥರ ಸಲಹೆ ಸಹಾನುಭೂತಿಗಳನ್ನು ಬೇಡಿದರೆ ತಪ್ಪಾಗಲಾರದೆಂದು ನನಗೆ ಅನಿಸುತ್ತದೆ

ಒಕ್ಕಲತನದ ವಿಷಯವಾಗಿ ಇಂದು ಜಗತ್ತಿನಲ್ಲಿ ಉಂಟಾಗಿರುವ ಜಾಗ್ರತಿಗೆ ಅನುಸರಿಸಿ, ನಮ್ಮಲ್ಲಿ ಈ ವಿಷಯದಲ್ಲಿ ಇರಬೇಕಾದ ವಾಙ್ಮಯದ ಒಂದು ಶತಾಂ ಶವು ಕೂಡ ಇರುವದಿಲ್ಲ ಎಂಬದು ವಿಷಾದಕರವು. ಇದಕ್ಕೆ ಬರಹಗಾರರ ಕೊರ ತೆಗಿಂತಲೂ ಓದುಗರ ಕೊರತೆಯೇ ಮುಖ್ಯ ಕಾರಣವೆಂದು ಹೇಳಬಹುದು. ಒಕ್ಕಲತನದ ಬರಹಗಳನ್ನು ಓದಬೇಕಾದವರು ನಮ್ಮೆಲ್ಲರ ದುರ್ದೈವದಿಂದ ಅಕ್ಷರ ಶತ್ರುಗಳಾಗಿ ಬಿಟ್ಟಿದ್ದಾರೆ. ಓದು ಬರಹಗಳನ್ನು ಬಲ್ಲವರಿಗೆ ಒಕ್ಕಲತನದಲ್ಲಿ ಪ್ರೀತಿಯಿಲ್ಲ. ಒಕ್ಕಲತನವು ಹೀನ ತರಗತಿಯ ಉದ್ಯಮವು ಅನಿಸುತ್ತದೆ! ಅದನ್ನು ನಡಿಸಲಿಕ್ಕೆ ಓದುಬರಹಗಳ ಅವಶ್ಯಕತೆಯೇ ಇಲ್ಲವೆಂದೂ ಕೆಲವು ಬುದ್ಧಿ ವಂತರು ಹೇಳಬಹುದು!! ಅಂದ ಮೇಲೆ ಒಕ್ಕಲತನದ ವಿಷಯವಾಗಿ ಬರೆಯು ವದಕ್ಕೂ ಓದುವದಕ್ಕೂ ಉತ್ತೇಜನವು ಎಲ್ಲಿಂದ ಬರಬೇಕು? ಹೀಗಾಗಿ ಕನ್ನಡ

ದಲ್ಲಿ ಬರೆದ ಸಣ್ಣ ದೊಡ್ಡ ಪುಸ್ತಕಗಳಿಗೆ ಉತ್ತೇಜನವಿಲ್ಲಗೆ ಮುದ್ರಣದ ವೆಚ್ಚ ವನ್ನು ನೂರಕ್ಕೆ ತೊಂಭತ್ತಕ್ಕಿಂತ ಹೆಚ್ಚಿನ ಅಂಶದಲ್ಲಿ ಕಯ್ಯಿಂದ ತೆತ್ತು ಸಾಲಂ ಡಿಗನಾಗಿ ಕೂಡ್ರುವ ಹೊತ್ತು ನನಗೆ ಬಂದಿದೆ "ಒಕ್ಕಲಿಗರ ಕೈಪಿಡಿ" ಎಂಬ ವನ್ನು ಚಿಕ್ಕ ಚಿಕ್ಕ ಮಾಲಿಗಳ ರೂಪದಲ್ಲಿ ಅತ್ಯಲ್ಪ ಬೆಲೆ ಇಟ್ಟು ಎರಡು ತಿಂಗಳಿ ಗೊಂದರಂತೆ ಪ್ರಸಿದ್ಧಪಡಿಸಿ ಸುಮಾರು ಎರಡು ವರ್ಷಗಳಲ್ಲಿ ಮುಗಿಸಬೇಕೆಂದು ಯೋಚಿಸಿದೆನು. ಒಕ್ಕಲಿಗರ ಕೈಪಿಡಿಯು ಎರಡು ಮಾಲಿಗಳು ಪ್ರಸಿದ್ಧವಾದವು. ಜಾಹೀರಾತು ಮುಂತಾದ್ದಕ್ಕೂ ಕೆಲಮಟ್ಟಿಗೆ ದುಡ್ಡು ಹಾಕಿದೆನು ಆದರೆ ಉಪ ಯೋಗವಾಗಲಿಲ್ಲ. ಒಕ್ಕಲಿಗರ ಕೈಪಿಡಿಯು ಮೂರನೇ ಮಾಲೆಯು ಇನ್ನೂ ಹೊರ ಬೀಳುವದು ಸಾಧ್ಯವಾಗಲಿಲ್ಲ.

ಆದಾಗ್ಯೂ ಇಂದಿನವರೆಗೆ ಹಣ್ಣಿನ ತೋಟಗಳ ವಿಷಯದಲ್ಲಿ ಆಗಿರುವ ತೀವ್ರ ಪ್ರಗತಿಯನ್ನು ಕಂಡು ನಮ್ಮ ಬಾಂಧವರಿಗೆ ಇದರ ಉಪಯೋಗವೇ ಆಗುವದಿಲ್ಲವಲ್ಲ ಎಂದು ಕಡು ನೊಂದು "ಪುನಃ ಯತ್ನವಮಾಡು" ಎಂಬ ನುಡಿ ಯಂತೆ ಈ "ಹಣ್ಣಿನ ತೋಟಗಳ"ನ್ನು ಬರೆಯಲಾರಂಭಿಸಿದೆನು. ಈ ಪ್ರಯತ್ನಕ್ಕೆ ಉತ್ತೇಜನವನ್ನು ಕನ್ನಡ ಬರಹಗಾರರ ಪುರೋಹಿತರಾದ ಧಾರವಾಡದ ಆಲೂರ ವೆಂಕಟರಾಯರು ಕೊಟ್ಟರು ಎಂದರೆ ತಪ್ಪಾಗದು. ಅವರು ಕೆಲವೊಂದು ಕಾರಣ ದಿಂದ ಕನ್ನಡದಲ್ಲಿ ಪುಸ್ತಕಗಳನ್ನು ಬರೆಯುವದರಲ್ಲಿ ತಮಗೆ ದೊರೆತ ಅನುಭವಾ ಮೃತದ ಒಂದು ತೊಟಕನ್ನು ನನಗೆ ಕುಡಿಸಿದರು. ಅದರಿಂದ ಬರಹಗಾರರ ಹಣೆ ಯ ಬರಹವೇ ಹೀಗೆಂದು ಅರಿತುಕೊಂಡು ಈ ಉದ್ಯೋಗಕ್ಕೆ ಕೈಹಾಕಿದೆನು. ಇದ ಲ್ಲಿಗೆ ಕರ್ನಾಟಕದಲ್ಲಿ ಹುಟ್ಟಿ ಬೆಳೆದು ಆ ಮಾತೆಯ ಅಡಿಗಳಿಗೆ ಕೈಗೆ ನಿಲುಕುವ ಪುಷ್ಪಗಳನ್ನು ಹರಿದು ತಂದು ಅರ್ಪಿಸಿ ನಮಿಸಲಿಕ್ಕೆ ಈ ಜನ್ಮವು ಸಾರ್ಥವಾಗ ದೆಂದು ದೃಢ ನಂಬಿಗೆಯುಂಟಾಯಿತು. ಅಂತೂ "ಕರ್ನಾಟಕದಲ್ಲಿ ಹಣ್ಣಿನ ತೋಟಗಳು" ಹುಟ್ಟುವ ದಿನವು ಬಂದೇ ಹೋಯಿತು

ಈ ಚಿಕ್ಕ ಪುಸ್ತಕವು ಹಣ್ಣಿನ ತೋಟಗಳ ವಿಚಾರದಲ್ಲಿ ಈ ವರೆಗೆ ನಮ್ಮ ದೇಶದಲ್ಲಾದ ಎಲ್ಲ ಪ್ರಗತಿಗಳನ್ನೂ ಒಳಗೊಂಡಿರುವಂತೆ ಯಥಾಶಕ್ತಿ ಪ್ರಯತ್ನ ವನ್ನು ಮಾಡಿರುತ್ತೇನೆ. ಈ ಪ್ರಗತಿಗಳು ನಮ್ಮ ಕರ್ನಾಟಕದ ಪರಿಸ್ಥಿತಿಗೆ ಹ್ಯಾಗೆ ಅನ್ವಯಿಸಬಹುದೆಂಬದನ್ನು ತೋರಿಸಲಿಕ್ಕೆ ಸರ್ವಥಾ ಯತ್ನಿಸಿರುತ್ತೇನೆ. ಇಡೀ ಮುಂಬಯಿ ಇಲಾಖೆಯಲ್ಲೂ, ಮುಂಬಯಿ ಕರ್ನಾಟಕದ ಎಲ್ಲ ಭಾಗಗಳಲ್ಲೂ ಸಂಚರಿಸಿ ಹಣ್ಣಿನ ತೋಟಗಳ ಸ್ಥಿತಿಯನ್ನು ಅಭ್ಯಾಸಮಾಡಲಿಕ್ಕೂ, ತೋಟಿಗರ ಕಷ್ಟನಷ್ಟಗಳನ್ನು ಅರಿತು ಯಥಾಮತಿಯಾಗಿ ಉಪಾಯವನ್ನು ಸೂಚಿಸಲಿಕ್ಕೂ ಈ ಗೆಂಟು ವರ್ಷಗಳಲ್ಲಿ ದೊರೆತ ಅನೇಕ ಸುಸಂಧಿಗಳ ಅನುಭವವೇ ಈ ಕಾರ್ಯಕ್ಕೆ

ಆಧಾರವಾಗಿದೆ. ಅಲ್ಲದೆ ಈ ಮೊದಲು ಇಂಗ್ಲೀಷಿನಲ್ಲೂ ಮರಾಠಿಯಲ್ಲೂ ಬರೆಯಲ್ಪಟ್ಟ ಅನೇಕ ಪುಸ್ತಕಗಳ ಸಲಹೆಯನ್ನು ಧಾರಾಳವಾಗಿ ಪಡೆದಿದ್ದೇನೆ. ಇವೆಲ್ಲವುಗಳ ಫಲವು ಹ್ಯಾಗೆ ಪರಿಣಮಿಸಿದೆ ಎಂಬದನ್ನು ಓದುಗರೇ ನಿರ್ಣಯಿಸಬೇಕು.

ಸಾಧಾರಣವಾಗಿ ಒಕ್ಕಲತನದ ಆದಾಯ ವೆಚ್ಚಗಳು ಬಹು ಸೂಕ್ಷ್ಮವಾದವೂ, ಗಹನವಾದವೂ, ಅನಿಶ್ಚಿತವಾದವೂ ಆಗಿರುವದರಿಂದ ಈ ಮೊದಲು ಬರೆದ ಪುಸ್ತಕಗಳಲ್ಲಿ ಅವುಗಳ ಗೊಡವೆಗೇ ಯಾರೂ ಹೋದಂತೆ ತೋರುವದಿಲ್ಲ. ತೋಟಗಳ ವ್ಯವಸಾಯವು ಒಂದು ಧಂದೆಯೆಂದು ತಿಳಿದು ನಡೆಸಲ್ಪಡಬೇಕೆಂದು ನನ್ನ ಖಂಡಿತ ಅಭಿಪ್ರಾಯವಿರುವದರಿಂದ ಪ್ರತಿಯೊಂದು ಜಾತಿಯ ಹಣ್ಣಿನ ಗಿಡದ ಆದಾಯ ವೆಚ್ಚಗಳನ್ನು ಶಕ್ಯವಾದಷ್ಟು ವಿಸ್ತರವಾಗಿ ಕೊಟ್ಟಿರುತ್ತೇನೆ. ನಮ್ಮ ತೋಟಿಗರು ಸಾಮಾನ್ಯವಾಗಿ ಲೆಖ್ಖಪತ್ರವನ್ನು ಇಡದ್ದರಿಂದಲೂ, ಪರಿಸ್ಥಿತಿಗನುಸಾರವಾಗಿ ತೋಟಗಳ ಲಾಭಹಾನಿಗಳಲ್ಲಿ ಬಹಳೇ ವ್ಯತ್ಯಾಸವಾಗುವದರಿಂದಲೂ, ಈ ಪುಸ್ತಕದಲ್ಲಿ ಕೊಟ್ಟ ಆದಾಯವೆಚ್ಚಗಳ ಪತ್ರಿಕೆಯು ಬರೇ ಮಾರ್ಗದರ್ಶಕವಾದ ಮಾದರಿಯ ಅಂದಾಜು ಪತ್ರಿಕೆಯೆಂದು ತಿಳಿಯಬೇಕು. ಇದನ್ನು ಚರ್ಚಿಸಿ ಟೀಕಿಸುವವರು ನಿಶ್ಚಿತ ಪರಿಸ್ಥಿತಿಗಳಲ್ಲಿ ದೊರೆತ ತೋಟಗಳ ಲಾಭಹಾನಿಗಳ ಖಂಡಿತ ಪ್ರಕರಣಗಳನ್ನು ನನಗೆ ಕಳಿಸಿಕೊಡುವಷ್ಟು ದಯಮಾಡಿದರೆ ಅವರಿಗೆ ನಾನು ತುಂಬಾ ಋಣಿಯಾಗಿರುವೆನು. ಈ ವಿಷಯದಲ್ಲಿ ತೋಟಿಗರಲ್ಲಿ ಎಚ್ಚರ ಉಂಟಾಗಬೇಕೆಂಬದೇ ನನ್ನ ಧ್ಯೇಯವು.

ಈ ಪುಸ್ತಕವನ್ನು ಬರೆಯಲಿಕ್ಕೆ ಉತ್ತೇಜನವಿತ್ತ ಮ॥ ಸಾಲಿಮರ ಸಾಹೇಬರನ್ನೂ, ಚಿತ್ರಗಳ ಬ್ಲಾಕುಗಳನ್ನು ಕೊಟ್ಟು ನೆರವಾದ ಬೇಸಾಯ ಖಾತೆಯ ಡಾಯರೆಕ್ಟರ ಸಾಹೇಬರನ್ನೂ, ಇದಕ್ಕೆ ಬೇಕಾದ ಮಂಜೂರಿಯನ್ನು ದೊರಕಿಸಿ ಕೊಟ್ಟ ಹಣ್ಣುಹಂಪಲಗಳ ತಜ್ಞರಾದ ಡಾಕ್ಟರ ಚೀಮಾ ಸಾಹೇಬರನ್ನೂ ಇಲ್ಲಿ ಸ್ಮರಿಸದೆ ಇರಲಾರೆನು. ಈ ಪುಸ್ತಕವನ್ನು ಮುದ್ರಿಸಿಕೊಟ್ಟ ಪುಣೆಯ ಆರ್ಯಭೂಷಣ ಮುದ್ರಣಾಲಯದವರಿಗೂ, ಪ್ರೂಫುಗಳನ್ನು ಓದುವದರಲ್ಲಿ ಸಹಾಯ ಮಾಡಿದ ನನ್ನ ಪರಮಮಿತ್ರ ಶ್ರೀ ಕೊಡಕಣಿ ನರಸಿಂಹ ಭಟ್ಟ, ಬಿ. ಏಜಿ. ಇವರಿಗೂ ಕೃತಜ್ಞನಾಗಿರುತ್ತೇನೆ.

ಹೀಗೆಂದು ಕನ್ನಡಿಗರ ಉಡಿಯಲ್ಲಿ ಈ ಚಿಕ್ಕ ಮಗುವನ್ನಿಟ್ಟು, ಇದು ತಮ್ಮದೇ ಎಂದು ಅವರು ಲಾಲನೆ ಪಾಲನೆಗಳಿಂದ ಬೆಳೆಯಿಸಿ ಬಲಿಯಿಸಿ ದುಡಿಯಿಸಿಕೊಳ್ಳಬೇಕೆಂದು ವಿನೀತನಾಗಿ ಪ್ರಾರ್ಥಿಸುತ್ತೇನೆ.

ಪುಣೆ, ಶ್ರೀ ಶಕೆ ೧೮೫೪
ವಿಜಯದಶಮಿ.

ಕನ್ನಡಿಗರ ಮನೆಯಾಳು,
ಶಂಭು.

# ವಿಷಯಾನುಕ್ರಮಣಿಕೆ

## ಮುಂಬಯಿ ಕರ್ನಾಟಕದಲ್ಲಿ

# ಹಣ್ಣಿನ ತೋಟಗಳು

## ಪ್ರಕರಣ ೧

### ವಿಷಯ ಪ್ರವೇಶ

ಮುಂಬಯಿ ಕರ್ನಾಟಕವೆಂದರೆ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕದ ಭಾಗವು. ಈ ಭಾಗಕ್ಕೆ ಉತ್ತರ ಕರ್ನಾಟಕವೆಂತಲೂ ಅನ್ನಬಹುದು. ಇದರಲ್ಲಿ ಉತ್ತರ ಕನ್ನಡ, ಧಾರವಾಡ, ಬೆಳಗಾಂವಿ ಮತ್ತು ವಿಜಾಪೂರ ಜಿಲ್ಲೆಗಳ ಸಮಾವೇಶವಾಗುತ್ತದೆ. ಇಷ್ಟುದಿನ ಮುಂಬಯಿ ಇಲಾಖೆಯ ಬೇಸಾಯದ ಖಾತೆಯವರು ಧಾರವಾಡ, ಬೆಳಗಾಂವಿ, ವಿಜಾಪೂರ ಜಿಲ್ಲೆಗಳನ್ನಷ್ಟೇ ಮುಂಬಯಿ ಕರ್ನಾಟಕವೆಂದು ವಿಭಾಗಿಸಿ, ಉತ್ತರ ಕನ್ನಡ ಜಿಲ್ಲೆಯನ್ನು ಅದರಲ್ಲಿಯ ನೈಸರ್ಗಿಕ ಸಂಗತಿಗಳ ಮೂಲಕ ಕೊಂಕಣ ವಿಭಾಗದಲ್ಲಿ ಸೇರಿಸಿಕೊಂಡಿದ್ದರು. ಈ ರಚನೆಯು ಬೇಸಾಯದ ದೃಷ್ಟಿಯಿಂದ ಸ್ವಾಭಾವಿಕವೇ ಆಗಿತ್ತು ಎನ್ನಲು ಅಡ್ಡಿಯಿಲ್ಲ. ಆದರೆ ಈಗಿನ ಪರಿಸ್ಥಿತಿಯ ಮೂಲಕ ಉತ್ತರ ಕನ್ನಡವೂ ಮುಂಬಯಿ ಕರ್ನಾಟಕದಲ್ಲಿ ಬೇಸಾಯ ಖಾತೆಯವರಿಂದಲೇ ಸೇರಿಸಿಕೊಳ್ಳಲ್ಪಟ್ಟ ಕಾರಣ ಭಾಷಾನ್ವಯ ಪ್ರಾಂತ ರಚನೆಯು ಒಂದು ಮೆಟ್ಟಿಲಾದರೂ ಒಕ್ಕಲಿಗನ ದೃಷ್ಟಿಯಿಂದ ಸಾಧಿಸಿದಂತಾಯಿತು. ಹೀಗೆ ಒಟ್ಟುಗೂಡಿದ ನಾಲ್ಕು ಜಿಲ್ಲೆಗಳ ಮುಂಬಯಿ ಕರ್ನಾಟಕಸ್ಥರ ಉಪಯೋಗಕ್ಕಾಗಿ ಈ ಚಿಕ್ಕ ಪುಸ್ತಕದೊಳಗಿನ ಮಾಹಿತಿಯು ಕೂಡಿ ಹಾಕಲ್ಪಟ್ಟಿದೆಯಾದರೂ, ಇಂಥದೇ ಪರಿಸ್ಥಿತಿಗಳುಳ್ಳ ಉಳಿದ ಭಾಗಗಳಿಗೂ ಇದರೊಳಗಿನ ತತ್ವಗಳು ಅನ್ವಯಿಸುವವೆಂಬದನ್ನು ಮರೆಯಲಾಗದು.

ಮುಂಬಯಿ ಕರ್ನಾಟಕದಲ್ಲಿ ಉತ್ತರ ಕನ್ನಡ ಜಿಲ್ಲೆಯ ಸಮುದ್ರ ಪಟ್ಟಿಯೂ, ಸಹ್ಯಾದ್ರಿಯ ಮಗ್ಗಲಿಗೆ ಬಹಳ ಮಳೆಯಾಗುವ ಘೋರಾರಣ್ಯದಿಂದ ತುಂಬಿದ ಘಟ್ಟದ ಪ್ರದೇಶವೂ, ಅದನ್ನೇರಿದ ಬಳಿಕ ಬರುವ ಮಲೆನಾಡೂ, ಆ ಮಲೆನಾಡಿನ ಪೂರ್ವಕ್ಕಿರುವ ದೃಷ್ಟಿಹಾಯುವ ವರೆಗೂ ಬೈಲಾದ ಬೈಲು ಸೀಮೆಯೂ ಒಳಗೊಂಡಿರುತ್ತವೆ. ಅತಿವೃಷ್ಟಿ–ಅನಾವೃಷ್ಟಿಗಳ ನಡುವಿನ ಅಂತರವನ್ನೆಲ್ಲ ತುಂಬುವ ಪ್ರದೇಶಗಳಿರುತ್ತವೆ. ಅತ್ಯುಷ್ಣವಾದ ಹವಾಮಾನವೂ ಸಮಶೀತೋಷ್ಣವಾದ ಹವಾಮಾ

ನೆವೂ ಇರುತ್ತವೆ. ಮಣ್ಣು ನೀರುಗಳ ಮಾತಾದರೂ ಹಾಗೆಯೇ ಸರಿ. ನೀರಿನ ಹನಿಗೆ ಬಾಯ್ತೆರೆದು ನಿಂತ ವಿಜಾಪೂರ ಜಿಲ್ಹೆಯೂ, ಮಳೆಯಾಗುವದೂ ಇಲ್ಲ, ಆಗದೆ ಇರುವದೂ ಇಲ್ಲ ಎಂಬಂತಿರುವ ಬೆಳಗಾಂವಿ ಧಾರವಾಡ ಜಿಲ್ಹೆಗಳ ಭಾಗ ಗಳೂ, ಎಡೆಬಿಡದೆ ಮಳೆಯಾಗಿ ಸಾಕುಬೇಕು ಮಾಡುವ ಉತ್ತರ ಕನ್ನಡ ಜಿಲ್ಹೆಯೂ ಉದಾಹರಣೆಗಳು. ಸಿರ್ಸಿ ಸಿದ್ದಾಪೂರ ಸೀಮೆಗಳಂಥ ಎಂದೆಂದೂ ಬತ್ತದ ನೀರಿನ ಝರಿಗಳೂ ಅಬ್ಬಿಗಳೂ ಹರಿಯುತ್ತಿರುವ ಪ್ರದೇಶಗಳೂ, ಆಳದಲ್ಲಿ ಪಾತಾಳ ವನ್ನು ಮುಟ್ಟುವವೋ ಎಂಬಂತಿರುವ ಬಾವಿಗಳುಳ್ಳ ಧಾರವಾಡ ಬೆಳಗಾಂವಿಗಳ ನೆರೆಯ ಸೀಮೆಗಳೂ, ಕುಡಿಯಲಿಕ್ಕೆ ನೀರು ದುರ್ಲಭವಾಗಿರುವಂಥ ಬಾಗಲಕೋಟೆ ಬಾದಾಮಿಯ ಪ್ರದೇಶಗಳೂ ಇರುವವು. ವಿಜಾಪೂರ ಜಿಲ್ಹೆಯಲ್ಲಿರುವ ಆಳದ ನೆಲೆ ಯು ಸಿಗದಂಥ ಎರೆ ಮಣ್ಣಿನ ನೆಲವನ್ನೂ, ಧಾರವಾಡ ಬೆಳಗಾಂವಿಗಳಿಂದ ಉತ್ತರ ಕನ್ನಡದ ವರೆಗೆ ಹಬ್ಬಿದ ಕೆಮ್ಮಣ್ಣಿನ ಭೂಮಿಯನ್ನೂ, ಗುಡ್ಡಗಾಡು ಪ್ರದೇಶದಲ್ಲಿ ರುವ ಕಾಗದಾಳಿ ಮಣ್ಣಿನ ತೋಟಗಳನ್ನೂ, ಸಮುದ್ರ ದಂಡೆಗುಂಟ ಹಬ್ಬಿರುವ ಉಸುಕಿನ ಬೈಲುಗಳನ್ನೂ ಉಲ್ಲೇಖಿಸದೆ ಇರಲಾಗದು. ಕಾಳೀ, ಗಂಗಾವಳೀ, ಅಘನಾಶಿನೀ, ಶರಾವತೀ ಮುಂತಾದ ಪಶ್ಚಿಮ ಸಮುದ್ರವನ್ನು ಕೂಡುವ ನದಿಗಳೂ, ಕೃಷ್ಣಾ, ಘಟಪ್ರಭಾ, ಮಲಪ್ರಭಾ, ವರದಾ, ತುಂಗಭದ್ರಾ ಮುಂತಾದ ಬೈಲು ಸೀಮೆಯ ನದಿಗಳೂ, ಅವುಗಳನ್ನು ಹಿಂಬಾಲಿಸಿ ಪೋಷಿಸುವ ಸಣ್ಣ ಪುಟ್ಟ ಹೊಳೆಹಳ್ಳಗಳೂ ಅನೇಕವಿರುತ್ತವೆ. ಈ ಹೊಳೆಹಳ್ಳಗಳ ದಂಡೆಗುಂಟ ಉದ್ದಾ ನುದ್ದವಾಗಿ ಬಿದ್ದಿರುವ ಸದಾ ಫಲದ್ರೂಪವಾಗಿರುವ ವ್ಯವಸಾಯಕ್ಕೂ ಹಣ್ಣಿನ ತೋಟ ಗಳಿಗೂ ಅತ್ಯುತ್ತಮವಾಗಿರುವ ಹೊಲಗಳನ್ನು ಹೊಗಳುವದು ಹೊಸತಲ್ಲ. ಗುನ್ನಾ ಪೂರ ಕೆರೆ, ಇಸಳೂರ ಕೆರೆ, ಮುಗದ ಕೆರೆ, ಕೆಲಗೆರಿ ಮುಂತಾದ ಜಲಾಶಯಗಳೂ, ನೆರ್ಲಿಯಲ್ಲಿರುವ ಅಮೋಘವಾದ ನೀರಿನ ಸೆಲೆಯೂ, ರಾಮತೀರ್ಥದಂಥ ಗುಡ್ಡವನ್ನು ಒಡಕೊಂಡು ಜಿಗಿಯುವ ಝರಿಗಳೂ ಅನೇಕ ವುಂಟು. ಇವುಗಳಿಂದ ಹಸಿ ಮೊಳ ಗುತ್ತಿರುವ ಹೊಲಗಳಾದರೂ ಕಡಿಮೆಯಿಲ್ಲ.

ಹೀಗಿರುವ ಕರ್ನಾಟಕದಲ್ಲಿ* ಅನೇಕ ತರದ ಫಲ ವೃಕ್ಷಗಳೂ, ಬೆಳೆ ಬೆಳಸು ಗಳೂ, ಎಷ್ಟೋ ಶತಮಾನಗಳಿಂದ ನಿರಂತರವಾಗಿ ಬೆಳೆಸಲ್ಪಟ್ಟಿರುತ್ತವೆ. ಈಗಲೂ ಬೆಳೆಸಲ್ಪಡುತ್ತವೆ. ಒಂದಿಲ್ಲೊಂದು ನಾಡಿನಲ್ಲಾದರೂ ಯಾವದೊಂದು ಬೆಳೆಗೆ ಅನುಕೂಲವಾದ ಪರಿಸ್ಥಿತಿಗಳು ದೊರೆಯದಿರುವದಿಲ್ಲ. ಮಾವು, ಬಾಳೆ, ಹಲಸು,

---

*ಇದರ ಮುಂದೆ "ಕರ್ನಾಟಕ" ವೆಂಬ ಶಬ್ದ ಬಂದಲ್ಲಿ ಮುಂಬಯಿ ಕರ್ನಾಟಕವೆಂತ ಸಾಮಾನ್ಯವಾಗಿ ತಿಳಕೊಳ್ಳಬೇಕು.

ನಿಂಬೆ, ಪೇರಲ, ನೇರಲ, ದಾಳಿಂಬ ಮೊದಲಾದ ಅನೇಕ ಹಣ್ಣಿನ ತೋಟಗಳೂ, ಇತರ ಗಡ್ಡೆ ಗೆಣಸು ಮತ್ತು ಧಾನ್ಯದ ಹೊಲಗಳೂ, ಕಣ್ಣಿಗೆ ಇಂಪಾಗಿರುತ್ತವೆ. ಒಂದಾನೊಂದು ಕಾಲದಲ್ಲಿ ನ್ವಾದಿ, ಬನವಾಸಿಗಳ ಫಲೋದ್ಯಾನಗಳೂ ವಿಹಾರೋದ್ಯಾನಗಳೂ ಹೆಸರುಗೊಂಡಿದ್ದವು. ಇತ್ತೀಚೆಯ ಮುಸಲ್ಮಾನರ ಕಾಲದಲ್ಲೂ ಕೂಡ ತೋಟಗಳನ್ನು ದುರ್ಲಕ್ಷಿಸುತ್ತಿರಲಿಲ್ಲ. ಅದರ ನಂತರ ಕಾರಣಾಂತರದಿಂದ ಜನರಲ್ಲಿ ಹಣ್ಣಿನ ತೋಟಗಳ ಮೇಲಿನ ಪ್ರೀತಿಯು ಕಡಿಮೆಯಾದಂತಾಗಿ, ಹಣ್ಣು ಹಂಪಲಗಳ ಬೆಳವಣಿಗೆಯು ತುಸು ಅವನತಿ ಹೊಂದಿತು. ಇತ್ತೀಚೆಗೆ ಸುಶಿಕ್ಷಿತರೂ ಸುಖಿಗಳೂ ಆದ ಎಷ್ಟೋ ಸದ್ಗೃಹಸ್ಥರು ಹಣ್ಣು ಹಂಪಲಗಳನ್ನು ಬೆಳೆಸುವ ಹವ್ಯಾಸಕ್ಕೆ ಬಿದ್ದುದರಿಂದಲೂ, ಇತರ ಒಕ್ಕಲಿಗರು ಅವರನ್ನು ಅನುಕರಿಸಿಯೂ, ಸ್ವಂತದ ಉತ್ಸುಕತೆಯಿಂದಲೂ ಹಣ್ಣಿನ ಗಿಡಗಳನ್ನು ನೆಟ್ಟು ತೋಟಗಳನ್ನು ಉಂಟು ಮಾಡುತ್ತಿರುವದರಿಂದಲೂ ಬೇಸಾಯದ ಈ ಭಾಗಕ್ಕೆ—ತುಸು ಅನ್ನುವದೇಕೆ—ಬಹಳೇ ಉತ್ತೇಜನ ವುಂಟಾಗುತ್ತಲಿದೆ. ಹಳೆಯ ತೋಟಗಳ ದುರಸ್ತಿಯಾಗುವದಲ್ಲದೆ ಹೊಸ ತೋಟಗಳೂ ಉಂಟಾಗುತ್ತಲಿವೆ. ಹಣ್ಣೆಂದರೆ ಬರೇ ಶ್ರೀಮಂತರ ಉಪಭೋಗದ ವಸ್ತುವೆಂದು ತಿಳಿಯಲ್ಪಡುವ ದಿನಗಳು ಹಿಂದಾಗುತ್ತಲಿವೆ. ಅದು ಎಲ್ಲರಿಗೂ ಅವಶ್ಯವಾಗಿ ಬೇಕಾಗಿರುವ, ನಾಮಾನ್ಯ ಜನರಿಗೂ ದಿನಂಪ್ರತಿ ಉಪಯೋಗದ ಆಹಾರವೆಂದು ಗ್ರಹಿಸುವ ದಿನಗಳೂ ಒತ್ತಿ ಬರುತ್ತಲಿವೆ. ಪ್ರತಿಯೊಬ್ಬ ಒಕ್ಕಲಿಗನಿಗೂ ತನ್ನ ಆಸ್ತಿಯಲ್ಲಿ ಕೆಲವೊಂದಾದರೂ ಹಣ್ಣಿನ ಗಿಡಗಳು ಇರಲೇ ಬೇಕೆಂದೂ, ಅವುಗಳಿಂದ ತಾನು ಮನೆಯ ಖರ್ಚಿನ ಹಣ್ಣುಗಳನ್ನು ಬೆಳೆದು ಸವಿಯ ಬೇಕೆಂತಲೂ ಅನಿಸುತ್ತಿದೆ. ಹೊಲಮನೆಯಿಲ್ಲದವರೂ, ಶಹರ ವಾಸಿಗಳೂ ತಮ್ಮ ಮನೆಯ ಹಿಂದುಮುಂದಿನ ಅಂಗಳದಲ್ಲಾದರೂ ಒಂದೆರಡು ಬಾಳೆ, ಮಾವುಗಳನ್ನಾದರೂ ನೆಟ್ಟು ಬೆಳೆದು ಫಲವನ್ನನುಭವಿಸಬೇಕೆಂದು ಹಾತೊರೆಯುತ್ತಿದ್ದಾರೆ. ಇದೆಲ್ಲ ಹಣ್ಣಿನ ತೋಟಗಳ ಅಭಿವೃದ್ಧಿಗೆ ಶುಭ ಸೂಚಕ ವಲ್ಲವೇ ?

ಮುಂಬಯಿ ಕರ್ನಾಟಕದಲ್ಲಿ ಹಣ್ಣಿನ ತೋಟಗಳು ಹೊಸವಲ್ಲವೆಂಬದನ್ನು ಹೇಳಿದ್ದಾಯಿತು. ಆದರೆ ಅವು ಈಗ ಅಲ್ಲಲ್ಲಿ ಅಪರೂಪವಾಗಿ ಕಂಡು ಬರುವವೇ ಹೊರತು, ಎಲ್ಲ ಕಡೆಗಳಲ್ಲಿಯೂ ಅನುಕೂಲತೆಗಳನ್ನು ಅನುಸರಿಸಿ ಇರಬೇಕಾದಷ್ಟು ವ್ಯಾಪಕವಾಗಿ ಪಸರಿಸಲಿಲ್ಲವೆಂಬದು ಸಂತೋಷಕರವಲ್ಲ. ಅಲ್ಲದೆ, ಕರ್ನಾಟಕದಲ್ಲಿ ಯಾವ ಯಾವ ಜಾತಿಯ ಹಣ್ಣುಗಳನ್ನು ಬೆಳೆಸಲು ನೈಸರ್ಗಿಕ ಅನುಕೂಲತೆಗಳು ಇರುತ್ತವೋ ಆ ಎಲ್ಲ ಜಾತಿಯ ಹಣ್ಣುಗಳು ಇನ್ನೂ ಜನರ ಕಿವಿಗೆ ಕೂಡ ಬಿದ್ದಿರಲಿಕ್ಕಿಲ್ಲ ಎಲ್ಲೆಲ್ಲಿ ಹಣ್ಣಿನ ಗಿಡಗಳನ್ನು ಬೆಳೆಸಲು ಯೋಗ್ಯ ಯತ್ನವು ನಡೆಯುವದು ಅವಶ್ಯವಿರುವದೋ ಅಲ್ಲಲ್ಲಿ ಇನ್ನೂ ಪ್ರಯತ್ನವು ಮಾಡಲ್ಪಟ್ಟಿಲ್ಲ.

| ಜಿಲ್ಲೆ | ಅಕ್ಷಾಂಶ | ರೇಖಾಂಶ | ಕ್ಷೇತ್ರ | ಉಷ್ಣತೆ | ಮಳೆ | ಜನ ಸಂಖ್ಯೆ | ಒಟ್ಟು ಸಾಗು ಮಾಡಿದ್ದು | ಕ್ಷೇತ್ರ ಬಾಗಾಯಿತ | ಹಣ್ಣು |
|---|---|---|---|---|---|---|---|---|---|
| ೧. ಉತ್ತರ ಕನ್ನಡ | ೧೩°೫೩′ ರಿಂದ ೧೫°೩೨′ | ೭೪°೪′ ರಿಂದ ೭೫°೫′ | ಚೌರಸ ಮೈಲು ೩೯೪೫ | ೫೯° ರಿಂದ ೯೧° ಫಾ. | ಇಂಚು ೪೬ ರಿಂದ ೩೦೦ ಸರಾಸರಿ ೧೨೦ | ೪೦೧೭೨೨ | ೭೪೦೫೫೭ | ೨೧೯೫೭ | ೫೯೫೮ |
| ೨. ಧಾರವಾಡ ... | ೧೪°೧೭′ ರಿಂದ ೧೫°೫೩′ | ೭೪°೪೩′ ರಿಂದ ೭೬°೨′ | ೪೬೦೨ | — | ೬೦ | ೧೦೩೬೯೨೪ | ೨೭೫೪೩೦೫ | ೬೫೩೯೧ | ೨೬೬೫ |
| ೩. ಬೆಳಗಾಂವಿ ... | ೧೫°೨೨′ ರಿಂದ ೧೬°೫೮′ | ೭೪°೨′ ರಿಂದ ೭೫°೨೫′ | ೪೬೧೪ | ೫೭° ರಿಂದ ೧೦೦° ಫಾ. | ೫೦ | ೯೫೨೯೯೬ | ೨೧೧೬೮೦೨ | ೬೫೨೫೫ | ೧೭೯೬ |
| ೪. ವಿಜಾಪುರ .. | ೧೫°೪೯′ ರಿಂದ ೧೭°೨೯′ | ೭೫°೧೯′ ರಿಂದ ೭೬°೩೨′ | ೫೬೭೭ | ೧೦೯° ಫಾ. ವರೆಗೆ | ಅನಿಶ್ಚಿತ | ೭೯೬೮೭೬ | ೩೨೨೧೨೯ | ೨೭೮೩೬ | ೧೩೩೪ |
| | | | | | ಒಟ್ಟು | ೩೧೮೮೧೦೩ | ೮೦೩೨೯೯೩ | ೧೮೦೪೩೫ | ೧೧೬೫೩ |

ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಕೆಳಗಿನ ಕೋಷ್ಟಕದಲ್ಲಿ ಕಾಣಿಸಿದಂತೆ ಹಣ್ಣಿನ ತೋಟಗಳ ಕ್ಷೇತ್ರವು ಇರುತ್ತದೆ

| ಹಣ್ಣಿನ ಜಾತಿ | ಕ್ಷೇತ್ರ ಫಲ—ಎಕರೆಗಳು, (೧೯೨೪-೨೫.) | | | | |
|---|---|---|---|---|---|
| | ಉತ್ತರ ಕನ್ನಡ | ಧಾರವಾಡ | ಬೆಳಗಾಂವಿ | ವಿಜಾಪೂರ | ಒಟ್ಟು |
| ೧. ಮಾವು ... | ೧೦೮೬ | ೧೯೮೭ | ೮೭೬ | ೩೮೨ | ೪೦೩೧ |
| ೨. ಬಾಳೆ ... | ೩೬೫೮ | ೩೬೮ | ೬೨೦ | ೭೪೫ | ೫೩೯೧ |
| ೩. ಕಿತ್ತಳೆ ವರ್ಗ .. | — | ೩೬ | ೧೩ | ೬೫ | ೧೧೪ |
| ೪. ಪೇರಲ .. | -- | ೫೦೬ | ೧೫೧ | ೧೦೩ | ೭೬೦ |
| ೫. ದಾಳಿಂಬ | --- | -- | ೧೭ | ೨೩ | ೪೦ |
| ೬. ಅಂಜೀರ ... | — | ೬ | — | ೧೫ | ೨೧ |
| ೭. ಚಿಕ್ಕು ... | — | -- | — | ೧ | ೧ |
| ೮. ಹಲಸು ... | ೪೫೫ | ೬೨ | ೧೫ | — | ೫೩೨ |
| ೯ ನೇರಲ ... | ಬಿಡಿ ಮರಗಳು ಅಲ್ಲಲ್ಲಿ ಬಹಳ ಇರುತ್ತವೆ. | | | | --- |
| ೧೦. ಪರಂಭಾಳೆ .. | ೧೦ | -- | - | — | ೧೦ |
| ೧೧. ಗೋವೆ ಹಣ್ಣು | ೭೪ | - | — | — | ೭೪ |
| ೧೨. ಸೀತಾಫಳ ವರ್ಗ | — | — | ೪ | — | ೪ |
| ಒಟ್ಟು ... | ೫೯೫೮ | ೨೬೬೫ | ೧೬೯೬ | ೧೩೩೪ | ೧೧೬೫೩ |

ಟೀಪು :—ಈ ಕೋಷ್ಟಕದಲ್ಲಿ ಹಳ್ಳಿಯ ಅಧಿಕಾರಿಗಳು ಕಳಿಸಿದ ಕ್ಷೇತ್ರವು ಮಾತ್ರ ತೋರಿಸಲ್ಪಟ್ಟಿದೆ. ಇದಲ್ಲದೆ ಇನ್ನೂ ಅಲ್ಪಸ್ವಲ್ಪ ಕ್ಷೇತ್ರವು ಕೆಲವೆಡೆಗಳಲ್ಲಿ ಇರಬಹುದು.

ಮೇಲಿನ ಕೋಷ್ಟಕದಿಂದ ತಿಳಿಯುವದೇನೆಂದರೆ—ಮುಂಬಯಿ ಕರ್ನಾಟಕ ದಲ್ಲಿ ಮುಖ್ಯವಾಗಿ ಮಾವು, ಬಾಳೆ, ಗೋವೆ, ಹಣ್ಣು, ಪೇರಲ, ಹಲಸು ಇವಷ್ಟೇ ಬೆಳೆಸಲ್ಪಡುತ್ತವೆ. ಇವಲ್ಲದೆ ಬೇರೆ ನಾಲ್ಕೆಂಟು ಜಾತಿಯ ಹಣ್ಣಿನಮರಗಳು ಅಲ್ಲಲ್ಲಿ ಕಂಡುಬಂದರೂ ಅವು ಬಹಳ ವಿರಳ. ಇಲ್ಲವೆಂತಲೇ ಅನ್ನ ಬಹುದು, ಕಿತ್ತಳೀ ವರ್ಗದಲ್ಲಿ ಹುಳಿ ನಿಂಬೆಯ ಗಿಡಗಳೇ ಬಹಳ. ಇತರ ಪ್ರಾಂತಗಳಲ್ಲಿ ಬಹಳ ಬೆಳೆ ಸಲ್ಪಡುವ, ಒಳ್ಳೇ ಉತ್ಪನ್ನವನ್ನು ಕೊಡುವ, ಪಪ್ಪಾಯಿ, ದ್ರಾಕ್ಷೆ, ಸಂತ್ರೆ, ಕಿತ್ತಳೀ ಹಣ್ಣು, ಮೋಸಂಬಿ, ಅಂಜೀರ, ಚಿಕ್ಕೂ ಮುಂತಾದ ರಸವತ್ತಾಗಿಯೂ ರುಚಿಕರವಾಗಿಯೂ ಇರುವ ಶ್ರೇಷ್ಠ ಹಣ್ಣುಗಳ ಹೆಸರೇ ಇಲ್ಲ. ಇಂಥ ಹಣ್ಣುಗ ಳನ್ನು ಬೆಳೆಸುವ ಪ್ರಯತ್ನವು ಈಗ ಅಲ್ಲಲ್ಲಿ ನಡೆದಿರುತ್ತದೆಂಬದು ಸಂತೋಷಕರವು.

ಹಣ್ಣಿನ ತೋಟಗಳ ಒಟ್ಟು ಕ್ಷೇತ್ರವು ಬರೇ ೧೧೬೫೩ ಎಕರೆಗಳಿರುತ್ತದೆ. ಮುಂಬಯಿ ಕರ್ನಾಟಕದಲ್ಲಿ ಒಟ್ಟು ಸಾಗುಮಾಡಲ್ಪಡುತ್ತಿರುವ ಕ್ಷೇತ್ರವು ೮೦೩೨೪೭೨ ಎಕರೆಗಳು, ಅದರಲ್ಲಿ ನೀರಿನ ಅನುಕೂಲತೆಯಿರುವ ಬಾಗಾಯಿತ ಕ್ಷೇತ್ರವು ೧೮೦೪೩೫ ಎಕರೆಗಳು, ಇದರ ಮೇಲಿಂದ ನೋಡಲು ಕರ್ನಾಟಕದೊಳ ಗಿನ ಹಣ್ಣಿನ ತೋಟಗಳ ಕ್ಷೇತ್ರವು ಏನೂ ಇರುವದಿಲ್ಲ. ಇಷ್ಟೇ ಅಲ್ಲ ಜನ ಸಂಖ್ಯೆಯ ಮಾನದಿಂದ ೪-೫ ಜನರಿರುವ ಒಂದೊಂದು ಕುಟುಂಬದ ಪಾಲಿಗೆ ಅರ್ಧಗುಂರೆಯಷ್ಟು ಹಣ್ಣಿನ ಕ್ಷೇತ್ರವು ಮಾತ್ರ ಬರುತ್ತದೆ. ಇದರೊಡನೆ ಹೋಲಿಸಿ ನೋಡುವದಕ್ಕಾಗಿ ಬೇರೆ ಕೆಲವು ದೇಶಗಳಲ್ಲಿ ಎಷ್ಟು ಜನರಿಗೆ ಒಂದು ಎಕರೆ ಹಣ್ಣಿನ ಕ್ಷೇತ್ರವಿರುತ್ತದೆಂಬದನ್ನು ತೋರಿಸಿರುತ್ತದೆ.

| | | | | | | | |
|---|---|---|---|---|---|---|---|
| ಫ್ರಾನ್ಸ | ದೇಶದಲ್ಲಿ | ಪ್ರತಿ | ೧೦ | ಜನರಿಗೆ | ೧ | ಎಕರೆ | ಹಣ್ಣಿನ ಕ್ಷೇತ್ರವಿದೆ |
| ಅಮೇರಿಕೆ | ,, | ,, | ೧೬ | ,, | ೧ | | ,, |
| ಜರ್ಮನಿ | ,, | ,, | ೫೬ | ,, | ೧ | | ,, |
| ಹಿಂದುಸ್ಥಾನ | ,, | ,, | ೪೫೦ | ,, | ೧ | | ,, |
| ಕರ್ನಾಟಕ | ,, | ,, | ೨೭೩ | ,, | ೧ | | ,, |

ಇದರ ಮೇಲಿಂದ ಆ ದೇಶಗಳಲ್ಲಿ ಹಣ್ಣಿನ ಪೂರೈಕೆಯು ಎಷ್ಟು ವಿಪುಲವಾಗಿ ಆಗುತ್ತದೆಂಬದು ತಿಳಿದು ಬರುವದು. ಹಿಂದುಸ್ಥಾನದಲ್ಲೂ ಅದರ ಭಾಗಗಳಲ್ಲೂ ಹಣ್ಣು ಇತರ ದೇಶಗಳ ಹತ್ತರಲ್ಲಿ ಒಂದಂಶದಷ್ಟು ಕೂಡ ದೊರೆಯುತ್ತಿರುವದಿಲ್ಲ.

ಪಾಶ್ಚಿಮಾತ್ಯ ದೇಶಗಳಲ್ಲಿ ಹಣ್ಣುಗಳ ಮಹತ್ವವು ಬಹಳ. ಪ್ರತಿಯೊಬ್ಬನಿಗೂ ಊಟದಲ್ಲೂ, ಊಟವಾದ ಬಳಿಕ ತಿನ್ನುವದಕ್ಕೂ, ಫಲಾಹಾರದಲ್ಲೂ ಹಣ್ಣುಗಳು ಬೇಕೇ ಬೇಕು. ಇತ್ತಿತ್ತಲಾಗಿನ ಶೋಧಗಳಿಂದಲೂ ಡಾಕ್ಟರ ಜನರ ಪ್ರಯೋಗಗ

ಳಿಂದಲೂ ಹಣ್ಣುಗಳಲ್ಲಿ ವ್ಹಿಟಾಮಿನ ಎಂದು ಕರೆಯಲ್ಪಡುವ ಮತ್ತು ಶರೀರದ ದಾರ್ಢ್ಯವನ್ನೂ ಸೌಂದರ್ಯವನ್ನೂ ಹೆಚ್ಚಿಸಿ ದೀರ್ಘಾಯುಷ್ಯವನ್ನು ಕೊಡುವ ಶಕ್ತಿಯುಳ್ಳ ಚೈತನ್ಯ ಪದಾರ್ಥವು ವಿಶೇಷವಾಗಿರುತ್ತದೆಂದು ತಿಳಿದು ಬಂದಿರುತ್ತದೆ. ಇದರಿಂದಂತೂ ಹಣ್ಣುಗಳ ಮಹತ್ವವು ತೀವ್ರವಾಗಿ ಬೆಳೆದಿದೆ. ಆದರಿಂದ ಪಾಶ್ಚಿಮಾತ್ಯರಿಗೆ ಹಣ್ಣುಗಳಿಲ್ಲದೆ ದಿನ ಕಳೆಯುವದು ಅಸಾಧ್ಯವೇ ಆಗಿದೆ. ಆದರೆ ನಮ್ಮ ಕರ್ನಾಟಕದಲ್ಲಿ ಹಣ್ಣುಗಳಿಗೆ ಇರಬೇಕಾದಷ್ಟು ಮಹತ್ವವು ಇನ್ನೂ ಇರುವದಿಲ್ಲ. ಹಣ್ಣುಗಳು ಎಲ್ಲರಿಗೂ ದೊರೆಯುವದೂ ಇಲ್ಲ ಅವುಗಳ ಸಾಗುವಳಿಯೂ ಸಾಕಷ್ಟು ಇರುವದಿಲ್ಲ.

ಇನ್ನು ಕರ್ನಾಟಕದಲ್ಲಿ ಏನೇನು ಬೆಳೆಸಬಹುದೆಂಬದನ್ನು ತುಸು ವಿಚಾರಿಸುವ. ಮುಂದಿನ ಪ್ರಕರಣದಲ್ಲಿ ಉಲ್ಲೇಖಿಸಿರುವ ವಿಷಯಗಳನ್ನೆಲ್ಲ ಚನ್ನಾಗಿ ಲಕ್ಷ್ಯದಲ್ಲಿ ತಂದು ಹಣ್ಣಿನ ತೋಟಗಳನ್ನು ತಯಾರಿಸಬೇಕೆಂದು ಇಲ್ಲಿ ಹೇಳಲೇಬೇಕು. ಆದರೂ ಸಾಮಾನ್ಯವಾಗಿ ವಿಜಾಪೂರ ಜಿಲ್ಹೆಯಲ್ಲಿ ಮತ್ತು ಧಾರವಾಡ ಬೆಳಗಾಂವಿ ಜಿಲ್ಹೆಗಳ ಪೂರ್ವಭಾಗದಲ್ಲಿ ದ್ರಾಕ್ಷೆ, ಕಿತ್ತಳೆ, ಮೋಸಂಬಿ, ಹುಳಿ ನಿಂಬೆ, ದಾಳಿಂಬ, ಪೇರಲ ಮುಂತಾದವುಗಳನ್ನು ಬೆಳೆಸಬಹುದು. ಈ ತರದ ಹಣ್ಣುಗಳಿಗೆ ಅವಶ್ಯವಾದ ಒಣ ಹವೆಯೂ, ಉಷ್ಣತೆಯೂ ಅಲ್ಲಿ ಇರುತ್ತದೆ. ಇವಕ್ಕೆ ಬೇಕಾದ ಮಣ್ಣಿನಿಂದ ನೀರು ಒಸರಿ ಹೋಗುವಂತಿರಬೇಕು. ಅದು ಬಹಳ ಆಳವಾದದ್ದಿರಬಾರದು ಇಂಥ ಸ್ಥಳಗಳನ್ನು ನೋಡಿ ಈ ಹಣ್ಣುಗಳನ್ನು ಎಷ್ಟೋ ಮಟ್ಟಿಗೆ ಹೆಚ್ಚಾಗಿ ಬೆಳೆಸ ಬಹುದು. ಧಾರವಾಡ ಬೆಳಗಾಂವಿ ಜಿಲ್ಹೆಗಳ ಮಲ್ನಾಡ ಪ್ರದೇಶಗಳಲ್ಲಿ ಮಾವು, ಬಾಳೆ, ಹಲಸು ಮುಂತಾದ ಹಣ್ಣಿನ ಮರಗಳನ್ನು ಯಥೇಷ್ಟವಾಗಿ ಬೆಳೆಸಲು ಅನುಕೂಲತೆಯಿದೆ. ಕರ್ನಾಟಕದಲ್ಲಿ ಆಫೂಸ ಪಾಯರಿ ಜಾತಿಯ ಮಾವಿನ ಹಣ್ಣು ಬೆಳೆಯುವದಿಲ್ಲ. ಈ ಜಾತಿಗಳೂ ಮಾವಿನಲ್ಲಿ ಅತ್ಯುತ್ತಮವೆನ್ನಲು ಅಡ್ಡಿಯಿಲ್ಲ. ಕೊಡಿಹಚ್ಚಿದ ಮಾವಿನ ಮರಗಳಂತೂ ಅಪರೂಪವೇ ಹೌದು. ಆದುದರಿಂದ ಇಂಥ ಸ್ಥಳಗಳಲ್ಲಿ ಆಫೂಸ, ಪಾಯರಿ, ಮಲಗೋವಾ, ಫರ್ನಾದಿನ ಮುಂತಾದ ಕೊಡಿಹಚ್ಚಿದ ಮಾವಿನ ತೋಟಗಳು ಅನೇಕವಾಗಿ ಬೆಳೆಸಲ್ಪಡಬೇಕು. ಬಾಳೆಯ ಅತ್ಯುತ್ತಮ ಜಾತಿಗಳನ್ನು ಉತ್ತರ ಕನ್ನಡದಿಂದಲೂ, ವಸಯಿ, ಪುಣೆ ಮುಂತಾದಲ್ಲಿಂದಲೂ ತಂದು ಬೆಳೆಸ ಬಹುದು. ಉತ್ತಮ ಜಾತಿಯ ನೇರಲ ಗಿಡಗಳೂ—ಕೊಡಿ ಕಟ್ಟಿ ಮಾಡಿದವು—ಪುಣೆಯ ಸರಕಾರೀ—ತೋಟದಲ್ಲಿ ಸಿಗುತ್ತವೆ. ಅವನ್ನು ಸರಿಯಾಗಿ ಒಗ್ಗಟ್ಟಿನಲ್ಲಿ ನೆಟ್ಟು ಬೆಳೆಸ ಬಹುದು. ಈ ಹಣ್ಣು ತಿನ್ನಲಿಕ್ಕೆ ಬಹು ರುಚಿಯಾಗಿರುವದಲ್ಲದೆ ಅದರ ರಸವನ್ನು ತೆಗೆದು ಬಾಟ್ಲಿಯಲ್ಲಿ ತುಂಬಿ ಮಧುಮೇಹದ ಮೇಲೆ ಔಷಧವಾಗಿಯೂ, ಕುಡಿಯುವ ಪಾನಕ ಮಾಡಲಿ

ಕ್ಕಾಗಿಯೂ ಉಪಯೋಗಿಸಬಹುದು ಹಲಸು, ನೇರಲ, ಹುಣಸೆ ಮುಂತಾದ ಮರಗಳನ್ನು ಮಾರ್ಗಗಳ ಎರಡೂ ಬದಿಗಳಲ್ಲೂ ಸಹ ಬೆಳೆಸ ಬಹುದು. ಇನ್ನು ಉತ್ತರ ಕನ್ನಡ ಜಿಲ್ಲೆಯ ಘಟ್ಟದ ಪ್ರದೇಶದಲ್ಲಿ ಬಾಳೆ, ಮಾವು, ಹುಳಿ ನಿಂಬೆ, ಹಲಸು, ಕಂಚಿ, ಸಕ್ಕರೆ ಕಂಚಿ, ಮಾದಲ, ನೇರಲ, ಜಂಬೆ ನೇರಲ, ಪನ್ನೇರಲ ಮುಂತಾದ ಅತ್ಯುತ್ತಮ ಜಾತಿಯ ಹಣ್ಣಿನ ತೋಟಗಳನ್ನು ತಯಾರಿಸ ಬಹುದು. ಈ ಮರಗಳೆಲ್ಲ ಈಗಾದರೂ ಅಲ್ಲಲ್ಲಿ ಬೆಳೆಯುತ್ತವೆ. ಆದರೆ ಯಾರೂ ಅವುಗಳನ್ನು ವ್ಯವಸ್ಥೆಯಿಂದ ನೆಟ್ಟು ತೋಟವಾಗಿ ಬೆಳೆಸುವ ಪ್ರಯತ್ನವನ್ನು ಮಾಡಿ ರುವದಿಲ್ಲ. ಘಟ್ಟದ ಕೆಳಗಿನ ಪ್ರಾಂತದಲ್ಲಿ ಆಫೂಸ ಪಾಯರಿ ಮಾವಿನ ಮರಗಳನ್ನು ಹೆಚ್ಚಾಗಿ ಬೆಳೆಸ ಬಹುದು. ಈಗ ಅಲ್ಲಿ ಹೆಚ್ಚಾಗಿ ಬೆಳೆಸಲ್ಪಡುವ ಕರೇ ಇಷಾಡು ಜಾತಿಯ ಹಣ್ಣು ತಡೆಯುವದಿಲ್ಲ. ಹಣ್ಣಾದ ಕೂಡಲೆ ಕೆಡುತ್ತದೆ, ಆದದ್ದರಿಂದ ಅವುಗಳನ್ನು ದೂರದ ಬಾಜಾರಕ್ಕೆ ಕಳಿಸುವದು ಬಹು ಕಷ್ಟ, ಇದರಿಂದ ಹಾನಿಯಾ ಗುತ್ತದೆ ಆಫೂಸ ಮಾವಿನ ಹಣ್ಣು ಬಹು ಶ್ರೇಷ್ಠವಾಗಿರುವದಲ್ಲದೆ ಬಹಳ ದಿನ ಗಳವರೆಗೆ ಕೆಡದೆ ಚನ್ನಾಗಿರುತ್ತದೆ. ಈ ಹಣ್ಣು ಬೇಸಾಯ ಖಾತೆಯವರ ಪ್ರಯ ತ್ನದಿಂದ ಈ ವರ್ಷದಿಂದ ಯುರೋಪಕ್ಕೆ ಹೋಗಲಾರಂಭಿಸಿದೆ. ಇದನ್ನು ಹೆಚ್ಚಾಗಿ ಬೆಳೆಸುವ ಪ್ರಯತ್ನವನ್ನು ಕನ್ನಡಿಗರು ಮಾಡಲೇ ಬೇಕು. ಹುಳಿನಿಂಬೆ, ಹಲಸು, ನೇರಲ, ಗೋವೆ ಹಣ್ಣು, ಬಾಳೆ, ಚಿಕ್ಕೂ ಮುಂತಾದವುಗಳನ್ನು ಸಮುದ್ರ ದಂಡೆಯ ಪ್ರಾಂತದಲ್ಲಿ ಎಷ್ಟೋ ಹೆಚ್ಚಾಗಿ ಬೆಳೆಸ ಬಹುದು.

ಕರ್ಣಾಟಕದ ಅನುಕೂಲತೆಗಳನ್ನೂ, ಹಣ್ಣಿನ ತೋಟಗಳ ಈಗಿನ ಸ್ಥಿತಿಯ ನ್ನೂ, ಮುಂದೆ ಪ್ರಯತ್ನದಿಂದ ಏನು ಮಾಡ ಬಹುದೆಂಬದನ್ನೂ ಸ್ವಲ್ಪದರಲ್ಲಿ ಹೇಳಿದ್ದಾಯಿತು. ಹಣ್ಣಿನ ತೋಟಗಳನ್ನು ತಯಾರಿಸುವಾಗ ಯಾವ ಸಂಗತಿಗ ಳನ್ನು ವಿಚಾರಿಸ ಬೇಕೆಂಬದನ್ನೂ, ಅವುಗಳ ಮಹತ್ವವು ಎಷ್ಟಿರತ್ತದೆಂಬದನ್ನೂ ಇನ್ನು ವಿಚಾರಿಸುವ.



# ಪ್ರಕರಣ ೨

## ಸಾಮಾನ್ಯ ಮಾಹಿತಿ

ಹಣ್ಣು ಹಂಪಲಗಳ ಸಾಗುವಳಿಯು ಉಳಿದ ಬಾಗಾಯಿತ ಜಿರಾಯಿತ ಬೆಳೆಗಳ ಸಾಗುವಳಿಗಿಂತ ಎಷ್ಟೋ ಭಿನ್ನವಾಗಿರುತ್ತದೆ. ಹಣ್ಣಿನ ಮರಗಳು ಸಾಮಾನ್ಯವಾಗಿ ಅನೇಕ ವರ್ಷಗಳ ತನಕ ಬಾಳುತ್ತವೆ. ಇತರ ಬೆಳೆಗಳು ಹಾಗಲ್ಲ. ವಾರ್ಷಿಕವಾಗಿರುತ್ತವೆ. ಹಣ್ಣಿನ ಮರಗಳನ್ನು ಮೊದಲಿಗೆ ನೆಡುವಾಗ ಅವು ಮುಂದೆ ಬಹಳ ವರ್ಷ ಬದುಕುವಂತೆ ನೆಲವನ್ನು ಆರಿಸುವದರಲ್ಲೂ, ಮಣ್ಣು ಹಸನ ಮಾಡುವದರಲ್ಲೂ, ನೀರು, ಗೊಬ್ಬರ, ಆಳು, ಭಾಂಡವಲು, ಬೇಲಿ, ಮಾರಾಟದ ಅನುಕೂಲತೆಗಳು, ಕಾದಿಡೋಣ ಮುಂತಾದ ಅನೇಕ ಅನುಕೂಲತೆಗಳನ್ನು ಒದಗಿಸಿಕೊಳ್ಳುವದರಲ್ಲೂ ಯೋಗ್ಯ ವಿಚಾರವು ಮಾಡಲ್ಪಡಬೇಕಾಗುತ್ತದೆ. ಒಮ್ಮೆ ನೆಟ್ಟ ಬಳಿಕ ಅವುಗಳನ್ನು ಎಚ್ಚರದಿಂದಲೂ ಪ್ರೀತಿಯಿಂದಲೂ ಸಾಕಬೇಕು. ಅವುಗಳನ್ನು ತೆಗೆದು ಹಾಕುವದರಿಂದಲೂ, ದುರ್ಲಕ್ಷಿಸುವದರಿಂದಲೂ ಹಾನಿಯಾಗುತ್ತದೆ. ಸರಿಯಾಗಿ ಸಾಗುಮಾಡಿದರೆ ಹಣ್ಣಿನ ಮರಗಳು ಬಹಳ ಉತ್ಪನ್ನವನ್ನು ಕೊಟ್ಟು ಲಾಭ ಮಾಡಿಕೊಡುತ್ತವೆ. ವಾರ್ಷಿಕ ಬೆಳೆಗಳು ಹಾಗಲ್ಲ. ಇವುಗಳಿಗೆ ಅಷ್ಟು ಹೆಚ್ಚಿನ ಜಾಗ್ರತೆಯು ಬೇಕಾಗಿಲ್ಲ. ಅವು ಕೆಟ್ಟರೂ ಒಂದು ವರ್ಷದ ಪೂರ್ತಿಗೆ. ಅವುಗಳಿಂದ ಬರುವ ಲಾಭವೂ ಹೆಚ್ಚಿಲ್ಲ. ಇದನ್ನು ಮನಸ್ಸಿಗೆ ತಂದು ನೋಡಿದರೆ, ಹಣ್ಣು ಹಂಪಲಗಳನ್ನು ಬೆಳೆಸಲು ಕೆಲವು ಮಹತ್ವದ ವಿಷಯಗಳನ್ನು ಮನನಮಾಡುವದು ಅವಶ್ಯವೆಂದು ಕಂಡು ಬರುವದು. ಅವು ಯಾವವೆಂದರೆ :—

**ವಿಶೇಷ ಜ್ಞಾನ :—** ಪ್ರತಿಯೊಂದು ವ್ಯಕ್ತಿಯ ರುಚಿಯು ಭಿನ್ನವಾಗಿರುವಂತೆ, ಪ್ರತಿಯೊಂದು ಬೆಳೆಗೂ ಅದಕ್ಕೆ ಬೇಕಾಗುವ ಸಾಗುವಳಿಯ ಕ್ರಮವೂ, ನೀರು ನೆಡಿಗೆಗಳೂ, ವೆಚ್ಚವೂ, ಆರೈಕೆಯೂ ಬೇರೆಯಾಗಿರುತ್ತವೆ. ಆಯಾ ಬೆಳೆಗಳ ಸ್ವಾಭಾವಿಕ ಅವಶ್ಯಕತೆಯನ್ನು ಹೊಲದ ಒಡೆಯನು ಸಂಪೂರ್ಣವಾಗಿಯೂ ಸೂಕ್ಷ್ಮವಾಗಿಯೂ ಅರಿತಿರಬೇಕು. ಮತ್ತು ಅವುಗಳನ್ನೆಲ್ಲ, ಸಕಾಲದಲ್ಲಿ ಪೂರೈಸಿಕೊಡಬೇಕು. ಹ್ಯಾಗೆಂದರೆ, ವಾರ್ಷಿಕ ಬೆಳೆಗಳನ್ನು ಮಳೆಯ ಸುರುವಿಗೆ ಹೊಲವನ್ನು ಹೂಡಿ ಹರಗಿ ಬಿತ್ತಿದರಾಯಿತು. ಹಣ್ಣಿನ ಗಿಡಗಳನ್ನು ನೆಡುವದು ಬೇರೆ ರೀತಿಯಿಂದ. ಮೊದಲು ಬೀಜವನ್ನು ಸಣ್ಣ ಮಡಿಗಳಲ್ಲಾಗಲಿ, ಚೋರಿಗೆಳಲ್ಲಾಗಲಿ ಬಿತ್ತಿ, ವರ್ಷಾರು ತಿಂಗಳು ಚನ್ನಾಗಿ ಬೆಳೆಸಿ, ಅಗೆಗಳು ದೊಡ್ಡವಾದ ಬಳಿಕ ಅವನ್ನು ಹಾಗೇ ಆಗಲಿ, ಕೊಡಿಕಟ್ಟಿ ಆಗಲಿ ಹೊಲದಲ್ಲಿ ನೆಡಬೇಕು. ನೆಡು

ವಾಗ ಕುಣಿಗಳನ್ನು ಯೋಗ್ಯ ಅಂತರದ ಮೇಲೆ ಸಾಲು ಸಾಲಾಗಿ ತೆಗೆದು, ಅವನ್ನು ಮಣ್ಣು ಗೊಬ್ಬರಗಳ ಮಿಶ್ರಣದಿಂದ ತುಂಬಿ, ಆ ಮೇಲೆ ಅಗೆಗಳನ್ನು ನೆಡಬೇಕು. ನೆಟ್ಟಕೂಡಲೆ ನೀರು ಕೊಡಬೇಕು. ನೆರಳು ಮಾಡಬೇಕು. ಇದರಂತೆ ಎಲ್ಲ ಹಣ್ಣಿನ ಗಿಡಗಳನ್ನೂ ಒಂದೇ ರೀತಿಯಿಂದ ಬೆಳೆಸುವದಿಲ್ಲ. ಬಾಳೆ, ಮಾವು, ಹಲಸು ಮುಂತಾದವು ಸದಾಪರ್ಣಿಗಳಾದುದರಿಂದ ಅವು ಹೂಬಿಡಲಿಕ್ಕೆ ಸಾಮಾನ್ಯವಾಗಿ ಏನೂ ಮಾಡಬೇಕಾಗುವದಿಲ್ಲ. ಆದರೆ ಕಿತ್ತಳೆ ವರ್ಗದ ಗಿಡಗಳೂ, ಪೇರಲ, ದ್ರಾಕ್ಷೆ ಮುಂತಾದವುಗಳೂ ಸದಾಪರ್ಣಿಗಳಲ್ಲ. ಋತು ಪರ್ಣಿಗಳಾಗಿರುತ್ತವೆ. ಅವು ಹೂಬಿಡುವ ಕಾಲದಲ್ಲಿ ಅವುಗಳ ಬುಡದ ಮಣ್ಣು ಅಗೆದು ಬೇರುಗಳನ್ನು ಕತ್ತರಿಸಿ ಕೆಲವು ದಿನ ತೆರೆದಿಡಬೇಕಾಗುತ್ತದೆ. ಹಾಗೆಯೇ ಟೊಂಗೆಗಳನ್ನೂ ಕತ್ತರಿಸಬೇಕು. ಈ ಕೆಲಸವನ್ನು ಯಾವಹೊತ್ತಿಗೆ ಹ್ಯಾಗೆ ಮಾಡಬೇಕೆಂಬದನ್ನು ಅರಿತು ಮಾಡದಿದ್ದರೆ ಈ ಮರಗಳಿಂದ ಫಲವೇ ಬರಲಿಕ್ಕಿಲ್ಲ. ಇದರಂತೆ ಇನ್ನೂ ಅನೇಕ ಸಂಗತಿಗಳಿರುತ್ತವೆ. ಹಣ್ಣಿನ ಗಿಡಗಳನ್ನು ಬರೇ ನೆಟ್ಟು ನೀರು, ಗೊಬ್ಬರಗಳನ್ನು ಹಾಕಿದರಾಗಲಿಲ್ಲ. ಹಾಗೆ ಮಾಡಿದರೆ ಬರಬೇಕಾದಷ್ಟು ಉತ್ಪನ್ನವು ಬರುವದಿಲ್ಲ. ಪ್ರತಿಯೊಂದು ಜಾತಿಯ ಸ್ವಭಾವವನ್ನು ಅರಿತು ಅದರಂತೆ ವ್ಯವಸ್ಥೆ ಮಾಡಿಕೊಡುವ ವಿಶೇಷ ಜ್ಞಾನವು ಅವಶ್ಯವಾಗಿರಬೇಕು.

**ತೋಟಕ್ಕೆ ಅನುಕೂಲವಾದ ಸ್ಥಳ:**—ತೋಟವನ್ನು ಎಲ್ಲಿ ಮಾಡಬೇಕು ಎಂಬದಕ್ಕೆ ಅನೇಕ ಸಂಗತಿಗಳ ವಿಚಾರ ಮಾಡಬೇಕಾಗುತ್ತದೆ. ಹೊಲಮನೆ ಇದ್ದವರಿಗೆ, ಇದ್ದ ಸ್ಥಳವನ್ನು ಬದಲು ಮಾಡುವದು ಸಾಧ್ಯವಿಲ್ಲ. ಮಣ್ಣು ನೀರು ಎಂಥದೇ ಇದ್ದರೂ ಅದರಲ್ಲೇ ಯೋಗ್ಯ ಹಣ್ಣಿನ ಗಿಡಗಳನ್ನು ಹಚ್ಚುವ ಅನುಕೂಲತೆ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಹೊಲಮನೆ ಇಲ್ಲದೆ ನೌಕರಿ ಮಾಡುವವರೂ ಶಹರದಲ್ಲಿರುವವರೂ ಆದವರಿಗೆ ಹೊಲವನ್ನು ಕೊಂಡುಕೊಳ್ಳಬೇಕಾಗುವದು. ಕೊಳ್ಳುವಾಗ ಅವರು ಎಲ್ಲಿ ಯಾವ ಹೊಲವನ್ನು ಕೊಳ್ಳಬೇಕು ಎಂಬದನ್ನು ಸಂಪೂರ್ಣ ವಿಚಾರಮಾಡಬೇಕು. ಮಣ್ಣಿನ ಗುಣಾವಗುಣಗಳನ್ನು ನೋಡಬೇಕು. ನೀರಿನ ಪೂರೈಕೆಯು ಸಾಕಿಷ್ಟಿರಬೇಕು. ಹೋಗಿ ಬರಲಿಕ್ಕೂ ಹಣ್ಣುಗಳನ್ನು ಮಾರಾಟಕ್ಕೆ ಕಳಿಸಲಿಕ್ಕೂ ಮಾರ್ಗವು ಒಳ್ಳೇದಿರಬೇಕು. ಆಗಗಾಡಿಯ ಸ್ಟೇಶನವು ಸಮೀಪದಲ್ಲಿರಬೇಕು. ಕೂಲಿಯ ಆಳುಗಳು ಸಿಗುತ್ತಿರಬೇಕು. ಇವೇ ಮೊದಲಾದ ಎಲ್ಲ ಸಂಗತಿಗಳನ್ನು ಮನನ ಮಾಡಿ ಹೊಲವನ್ನು ಕೊಳ್ಳಬೇಕು.

**ಮಣ್ಣು:**—ಹಣ್ಣಿನ ಮರಗಳು ಬಹಳ ವರ್ಷ ಬಾಳುವಂಥವೂ, ತಮ್ಮ ಬೇರುಗಳನ್ನು ಆಳವಾಗಿಯೂ ದೂರವಾಗಿಯೂ ಪಸರಿಸುವಂಥವೂ ಇರುವದರಿಂದ

ಅವುಗಳಿಗೆ ಬೇಕಾಗುವ ಮಣ್ಣು ಬಹಳ ಆಳವಲ್ಲದ್ದೂ ಸೈಲಾದದ್ದೂ ಇರಬೇಕು. ಬಹಳ ಆಳವಾದ ಜಿಗಟು ಮಣ್ಣಿನಲ್ಲಿ ಬೇರುಗಳು ಸರಿಯಾಗಿ ಪಸರಿಸಲಿಕ್ಕೆ ಅನುವು ಇರುವದಿಲ್ಲ. ಆಳವಾದ ಜಿಗಟು ಮಣ್ಣು ಬೇಸಿಗೆಯಲ್ಲಿ ಬಹಳ ಬಿರಿಯುವದರಿಂದ ದೊಡ್ಡ ದೊಡ್ಡ ಒಡಕುಗಳುಂಟಾಗಿ ಮರಗಳ ಬೇರುಗಳು ಹರಿಯಲ್ಪಡುತ್ತವೆ. ಅದರಿಂದ ಮರಗಳಿಗೆ ಬಹಳ ಅಪಾಯುವಾಗುತ್ತದೆ. ಅವುಗಳ ಬೆಳವಣಿಗೆಯು ಕುಂದುತ್ತದೆ. ಮಳೆಗಾಲದಲ್ಲಿ ಇಂಥ ಮಣ್ಣು ನೀರಿನಿಂದ ರಾಡಿಯಾಗಿ ಅದರಲ್ಲಿ ಓಡಾಡುವದೂ, ಯಾವದೊಂದು ಹೋರೆಯನ್ನು ಮಾಡುವದೂ ಕಷ್ಟವಾಗುತ್ತದೆ. ಆದದರಿಂದ ಹಣ್ಣಿನ ಮರಗಳಿಗೆ ಬೇಕಾದ ಮಣ್ಣು ಸಾಮಾನ್ಯವಾಗಿ ೨-೩ ಫೂಟು ಆಳವಾದದ್ದಿದ್ದು ಅದರ ಕೆಳಗೆ ಮುರಮ್ಮವಾಗಲಿ ಉಸಕಾಗಲಿ ಇರಬೇಕು. ಮುರಮ್ಮದಲ್ಲೂ ಉಸುಕಿನಲ್ಲೂ ಹೆಚ್ಚಾದ ನೀರೆಲ್ಲ ಇಂಗಿ ಹೋಗುತ್ತದೆ. ಕಲ್ಲರೆ ಯಿದ್ದರೆ ಒಳ್ಳೇದಲ್ಲ. ಕಲ್ಲರೆಯೊಳಗಿಂದ ನೀರು ಒಸರಿ ಹೋಗುವದಿಲ್ಲ. ಮತ್ತು ಬೇರುಗಳು ಕಲ್ಲರೆಯ ಥರವನ್ನು ಮುಟ್ಟಿದೊಡನೆ ಅವುಗಳ ಬೆಳವಣಿಗೆಯು ಕುಂಠಿತವಾಗಿ ಮರಗಳು ದಿನಗಳಲ್ಲಿ ಸಾಯಬಹುದು. ಅವುಗಳನ್ನು ಉಳಿಸಿಕೊಳ್ಳುವದು ಅಸಾಧ್ಯವಾಗುತ್ತದೆ. ಮಣ್ಣಿನಲ್ಲಿ ಕ್ಷಾರಗಳು ಬಹಳ ಇರಬಹುದು. ಹಣ್ಣಿನ ಮರಗಳಿಗೆ ಬಹುಶಃ ಇಡೀ ವರ್ಷ ನೀರು ಕೊಡಬೇಕಾಗುವದರಿಂದ ಕ್ಷಾರಗಳು ಮೇಲೆ ಬಂದು ಮರಗಳನ್ನು ನಾಶಮಾಡಬಹುದು. ಆದಾಗ್ಯೂ ಜಿರಾಯುತ ಬೆಳೆಗಳಿಗಿಂತ ಹಣ್ಣಿನ ಮರಗಳು ಹೆಚ್ಚು ಕ್ಷಾರಗಳನ್ನು ತಡಕೊಳ್ಳುತ್ತವೆಂದು ಇತ್ತೀಚೆಯ ಶೋಧದಿಂದ ತಿಳಿದು ಬಂದಿರುತ್ತದೆ. ಆದರೆ ಇದಕ್ಕೆ ಮಿತಿಯಿರುವದಷ್ಟೇ ? ನದಿಯ ದಂಡೆಗೆ ಹರಿದು ಬಂದು ಬಿದ್ದ ಮಣ್ಣು ಹಣ್ಣಿನ ಮರಗಳಿಗೆ ಉತ್ತಮ. ಇಂಥ ಮಣ್ಣಿನಲ್ಲಿ ಪೋಷಕ ದ್ರವ್ಯಗಳು ಸಾಕಷ್ಟಿರುತ್ತವೆ. ನೀರೂ ಚನ್ನಾಗಿ ಒಸರಿ ಹೋಗುತ್ತದೆ. ಬೇರುಗಳು ಪಸರಿಸಲಿಕ್ಕೆ ಬೇಕಾದಹಾಗೆ ಅನುವಿರುತ್ತದೆ.

ಹಣ್ಣಿನ ಮರಗಳನ್ನು ಬೆಳೆಸುವ ಸ್ಥಳವು ಸುತ್ತಲಿನ ಸ್ಥಳಗಳಿಗಿಂತ ಎತ್ತರವಾಗಿದ್ದರೆ ಬಹಳ ಒಳಿತು. ಇಂಥಲ್ಲಿ ನೀರು ನೆಲಸುವದಿಲ್ಲ. ಮಣ್ಣು ಬೇಗನೆ ಒಣಗಿ ಹದಕ್ಕೆ ಬರುತ್ತದೆ. ಅದರಂತೆ ಮೇಲಿನ ಮಣ್ಣು ಒಳ್ಳೆಯದಿದ್ದು ಅದರ ಕೆಳಗೆ ಶೇಡಿ ಮಣ್ಣಿನ ಥರವಾಗಲಿ ಜಿಗಟು ಮಣ್ಣಿನ ಥರವಾಗಲಿ ಇದ್ದರೆ ಒಳ್ಳೇದಲ್ಲ. ಯಾಕಂದರೆ ಮರದ ಬೇರುಗಳು ಮೇಲಿನ ಥರದಲ್ಲಿ ಇರುವ ತನಕ ಮರಗಳು ಪ್ರಬಲವಾಗಿ ಬೆಳೆಯುತ್ತವೆ. ಬೇರುಗಳು ಕೆಳಗಿನ ಜಿಗಟು ಮಣ್ಣಿನ ಥರವನ್ನು ಮುಟ್ಟಿದೊಡನೆ ಅವುಗಳ ಕಾರ್ಯವು ಬಂದಾಗಿ ಮರಗಳು ಒಮ್ಮಿಂದೊಮ್ಮೆ ಸಾಯಬಹುದು. ಅದರಿಂದ ಹಣ್ಣಿನ ತೋಟವನ್ನು ತಯಾರಿಸುವಾಗ ಹೊಲದಲ್ಲಿ ನಾಲ್ಕಾರು ಸ್ಥಳಗಳಲ್ಲಿ ನಾಲ್ಕೈದು ಫೂಟಾದರೂ ಆಳವಾದ ಕುಣಿಗಳನ್ನು ಅಗೆಸಿ ಮಣ್ಣಿನ ಥರಗಳನ್ನು ಚನ್ನಾಗಿ ಪರೀಕ್ಷೆಮಾಡಿ ಗಿಡಗಳನ್ನು ನೆಡಬೇಕು.

ಮಾವು, ಹಲಸು, ನೇರಲ ಮುಂತಾದ ಹಣ್ಣಿನ ಮರಗಳಿಗೆ ಮಣ್ಣು ಉಸುಕಿನ ದಾಗಲಿ, ಹರಳು ತುಂಬಿದ್ದಾಗಲಿ ಇರುವದು ಅವಶ್ಯವಾಗಿರುತ್ತದೆ. ಕಿತ್ತಳೆ, ಮೋಸಂಬಿ, ನಿಂಬಿಗಳಿಗಾದರೂ ಹಾಗೆಯೇ. ಉತ್ತರ ಕನ್ನಡ ಜಿಲ್ಲೆಯ ಕೆಮ್ಮಣ್ಣು, ಧಾರವಾಡ ಬೆಳಗಾಂವಿಗಳಲ್ಲಿಯ ಕೆಮ್ಮಣ್ಣು, ಗೋಕಾಕದಲ್ಲಿಯ ಉಸುಕಿನ ಮಣ್ಣು, ನದಿಯ ದಂಡೆಯ ಮಣ್ಣು ಇವಕ್ಕೆ ಉತ್ತಮ. ಯಾಕಂದರೆ ಈ ಮರಗಳ ಬೇರುಗಳು ಆಳವಾಗಿಯೂ ವಿಸ್ತಾರವಾಗಿಯೂ ಪಸರಿಸುತ್ತವೆ. ಬಾಳೆ, ದ್ರಾಕ್ಷೆ, ಅಂಜೀರ, ಪೇರಲ, ಮುಂತಾದವುಗಳ ಮಾತು ಹಾಗಲ್ಲ. ಈ ಮರ ಬಳ್ಳಿಗಳ ಬೇರುಗಳು ಮಣ್ಣಿನಲ್ಲಿ ಅಷ್ಟು ಆಳವಾಗಿ ಹೋಗುವದಿಲ್ಲ. ಮೇಲಿನ ಥರದಲ್ಲೇ ವ್ಯಾಪಿಸಿಕೊಂಡಿರುತ್ತವೆ. ಆದಕಾರಣ ಇವುಗಳಿಗೆ ಮಣ್ಣು ತುಸು ಜಿಗಟಾಗಿದ್ದರೂ ಆಳವಾಗಿದ್ದರೂ ಬರುತ್ತದೆನ್ನಬಹುದು. ಅಂಜೀರವು ಸುಣ್ಣದ ಹರಳುಗಳು ವಿಪುಲವಾಗಿರುವ ಶ್ರೇಢಿಯಂಥ ಮಣ್ಣಿನಲ್ಲಿ ಉತ್ತಮವಾಗಿ ಬೆಳೆಯುತ್ತದೆ. ದಾಳಿಂಬ, ಬೋರೆ ಮುಂತಾದ ಮರಗಳು ತೀರ ಕಸುವಿಲ್ಲದ ಹರಳು ನೆಲದಲ್ಲಾದರೂ ಬೆಳೆಯುತ್ತವೆ.

ನೀರು:—ಹಣ್ಣಿನ ಮರಗಳಿಗೆ ಇಡೀ ವರ್ಷ ಸಾಕಾಗುವಷ್ಟು ನೀರಿನ ಪೂರೈಕೆಯಿರಬೇಕು. ಪೇರಲ, ದಾಳಿಂಬ ಮುಂತಾದವುಗಳಿಗೆ ಹೂವಾಗಿ ಹಣ್ಣು ಹರಿದುಕೊಳ್ಳುವ ವರೆಗೆ ನೀರು ಕೊಡುವದು ಅವಶ್ಯ. ಒಂದು ಬೆಳೆಯ ಹಣ್ಣುಗಳನ್ನು ಹರಿದುಕೊಂಡಬಳಿಕ ಇನ್ನೊಂದು ಬೆಳೆಯ ಹೂವು ಬಿಡುವ ಹಂಗಾಮಿನ ತನಕ ಅವುಗಳಿಗೆ ನೀರು ಇಲ್ಲದಿದ್ದರೂ ಬರುತ್ತದೆ. ಮಾವಿನ ಗಿಡಗಳಿಗೆ ಮೊದಲಿನ ನಾಲ್ಕೈದು ವರ್ಷ ಮಾತ್ರ ನೀರು ಕೊಡುತ್ತಾರೆ. ಮುಂದೆ ಬರೇ ಮಳೆಯ ನೀರಿನಿಂದಲೇ ಅವು ಬೆಳೆದು ಫಲಕೊಡುತ್ತವೆ. ಕಿತ್ತಳೆ, ಮೋಸಂಬಿ, ನಿಂಬಿ ಗಿಡಗಳಿಗೆ ಸಾಮಾನ್ಯವಾಗಿ ಇಡೀ ವರ್ಷ ನೀರು ಬೇಕೆಂದರೂ ಅಡ್ಡಿಯಿಲ್ಲ. ಬಾಳೆಗಂತೂ ನೀರು ಕೊಟ್ಟಷ್ಟು ಕಡಿಮೆ. ಬೇರೆ ಬೇರೆ ಹಣ್ಣಿನ ಮರಗಳ ನೀರಿನ ಅವಶ್ಯಕತೆಯು ಬೇರೆ ಬೇರೆ ಇದ್ದರೂ, ತೋಟದಲ್ಲಿದ್ದ ಒಂದಲ್ಲ ಒಂದು ಜಾತಿಯ ಮರಗಳಿಗಾದರೂ ತಪ್ಪದೆ ನೀರು ಬೇಕೇ ಬೇಕು. ಆದರೂ ಮರಗಳ ಬುಡದಲ್ಲಿ ನೀರು ನೆಲಸಬಾರದು. ನೆಲಸಿದರೆ ಮಣ್ಣಿನಲ್ಲಿ ಹವೆಯಾಡುವದು ನಿಂತುಹೋಗಿ ಬೇರುಗಳ ಬೆಳವಣಿಗೆಗೆ ಬಾಧೆ ಬರುವದು. ಅದರಿಂದ ಮರಗಳಿಗೆ ಅಪಾಯವಾಗಬಹುದು. ಎಷ್ಟೋ ಪ್ರಸಂಗಗಳಲ್ಲಿ ನೀರು ನೆಲಸುವದರಿಂದ ಎಲೆಗಳೂ ಟೊಂಗೆಗಳೂ ಒಣಗಿದಂತೆ ಅರಿಶಿಣ ಬಣ್ಣದವಾಗಿ ಉದುರಿ ಹೋಗುವವು. ಸಣ್ಣ ದೊಡ್ಡ ಮಿಡಿಗಳು ಬೆಳೆಯದೆ ಇದಕ್ಕಿದ್ದಂತೆ ಉದುರುವವು. ಈ ಮಾತು ತುಸು ಆಶ್ಚರ್ಯವೆನಿಸಿದರೂ ನಿಜವಾಗಿರುತ್ತದೆ. ಆದದರಿಂದ ಹಣ್ಣಿನ ಮರಗಳಿಗೆ ನೀರು ಬೇಕಾಗಿದ್ದರೂ ಅತಿಶಯ ನೀರು ಉಪಯೋಗವಿಲ್ಲ. ಸಾಕಷ್ಟು ಮಾತ್ರ ಇರಬೇಕು. ಮಳೆಗಾಲದಲ್ಲಿ ಸಾಮಾನ್ಯವಾಗಿ ತೋಟಕ್ಕೆ ನೀರು

ಕೊಡುವದು ಬೇಡ. ಚಳಿಗಾಲದಲ್ಲಿ ಹತ್ತು ದಿನಗಳಿಗೊಮ್ಮೆ, ಮತ್ತು ಬೇಸಿಗೆಯಲ್ಲಿ ಎಂಟು ದಿನಗಳಿಗೊಮ್ಮೆ ಮಡಿಯಲ್ಲಿ ಎರಡು ಇಂಚು ಆಳವಾಗಿ ನಿಲ್ಲುವಷ್ಟು ನೀರು ಕೊಟ್ಟರೆ ಸಾಕು. ತೋಟವು ಚೆನ್ನಾಗಿ ವೃದ್ಧಿಯಾಗಬೇಕಾದರೆ, ಇದಿಷ್ಟು ನೀರು ತೋಟದ ಬಾವಿಯಲ್ಲಾಗಲಿ ಕಾಲುವೆಯಿಂದಾಗಲಿ ಸಿಗಲೇ ಬೇಕು. ನೀರು ಕೊಟ್ಟ ಮಾರನೇದಿನವಾಗಲಿ ಮೂರನೇದಿನವಾಗಲಿ ಮಡಿಗಳನ್ನು ಕೆದರಿಕೊಳ್ಳಬೇಕು. ಇಲ್ಲ ದಿದ್ದರೆ ಮೇಲಿನ ಮಣ್ಣು ಒಣಗಿ ಬಿರಿಕೆಗಳುಂಟಾಗುತ್ತವೆ. ಮತ್ತು ಹುಲ್ಲು ಕಳೆ ಗಳು ಬೆಳೆಯುತ್ತವೆ.

**ಹವೆ:—**ನಮ್ಮ ದೇಶದಲ್ಲಾಗುವ ಹಣ್ಣಿನ ಮರಗಳಿಗೆ ಸಾಧಾರಣವಾಗಿ ಉಷ್ಣತೆಯಿಂದ ಕೆಡಕಿಲ್ಲ, ಅಷ್ಟೇ ಅಲ್ಲ. ಬುಡಕ್ಕೆ ನೀರು ಸರಿಯಾಗಿ ಕೊಟ್ಟರೆ ಮೇಲೆ ಬಿಸಿಲು ಜೋರಾಗಿದ್ದಂತೆ ಅವು ಚನ್ನಾಗಿ ಬೆಳೆಯುತ್ತವೆ. ನೆರಳಿದ್ದರೆ ಅಷ್ಟು ಚನ್ನಾಗಿ ಬೆಳೆಯುವದಿಲ್ಲ. ಹವೆಯು ಸಮಶೀತೋಷ್ಣವಾಗಿದ್ದರೆ ಬಹಳ ಒಳ್ಳೆ ಯದು. ದ್ರಾಕ್ಷೆ, ದಾಳಿಂಬ, ಪೇರಲ ಮುಂತಾದವುಗಳಿಗೆ ಹವೆಯಲ್ಲಿ ತೇವು ಇರ ಬಾರದು. ಒಣಗಿದ ಹವೆಯು ಇರಬೇಕು. ಹೂ ಬಿಟ್ಟು ಮಿಡಿಗಳು ನಿಲ್ಲುವಾಗ ಆದರೂ ಹವೆಯು ಒಣಗಿದ್ದಿರಬೇಕು. ಹವೆಯಲ್ಲಿ ಆರ್ದ್ರತೆಯು ಹೆಚ್ಚಾಗಿದ್ದರೆ ಮರಗಳ ಮೇಲೂ ದ್ರಾಕ್ಷೆಯ ಬಳ್ಳಿಗಳ ಮೇಲೂ ರೋಗರುಜೆಗಳು ಹೆಚ್ಚಾಗುತ್ತವೆ. ಆದರೆ ಬಾಳೆ, ಹಲಸು, ಮಾವು ಮುಂತಾದವುಗಳಿಗೆ ಹವೆಯು ಉಷ್ಣವಾಗಿದ್ದು ಬೇಕಷ್ಟು ತೇವಿದ್ದರೂ ಅಡ್ಡಿಯಿಲ್ಲ. ನಮ್ಮಲ್ಲಿ ಬೆಳೆಯುವ ಹಣ್ಣಿನ ಮರಗಳಿಗೆ ಬಹಳ ತಂಡಿಯು ಸಹನವಾಗುವದಿಲ್ಲ. ನೀರು ಹೆಪ್ಪುಗಟ್ಟಿ ಬರ್ಫವಾಗುವಷ್ಟು ತಂಡಿಯು ಬಿದ್ದರಂತೂ ಅವು ಅರ್ಧಮರ್ಧ ಸತ್ತೇ ಹೋಗುತ್ತವೆ. ಅವುಗಳ ಮೇಲಿನ ಹೂಕಾಯಿಗಳೂ ಸುಟ್ಟು ಉದುರಿ ಹೋಗುತ್ತವೆ, ಇಂಥ ಸ್ಥಿತಿಯು ಕರ್ನಾಟಕದ ಯಾವ ಭಾಗದಲ್ಲೂ ಇಲ್ಲವೆನ್ನಬಹುದು.

**ಭಾಂಡವಲು:—**ಹಣ್ಣಿನ ಗಿಡಗಳನ್ನು ನೆಡುವಾಗ, ಹೊಲಗಳನ್ನು ಕೊಳ್ಳ ಲಿಕ್ಕೂ, ಬಾವಿ-ಕೆರೆಗಳನ್ನು ತೋಡಿಸಲಿಕ್ಕೂ, ದುರುಸ್ತಿ ಮಾಡಲಿಕ್ಕೂ, ನೆಲವನ್ನು ಹೂಡಿ, ಹರಗಿ, ಕುಣಿಗಳನ್ನು ತೆಗೆಸಲಿಕ್ಕೂ, ಸಸಿಗಳನ್ನೂ ಗಿಡಗಳನ್ನೂ ಕೊಳ್ಳ ಲಿಕ್ಕೂ ದುಡ್ಡು ಬೇಕು. ಗಿಡಗಳನ್ನು ನೆಟ್ಟು ತೋಟವನ್ನು ಸ್ಥಾಪಿಸಿದ ಬಳಿಕ ಗೊಬ್ಬರವನ್ನು ಕೊಳ್ಳಲಿಕ್ಕೂ, ಆಳುಗಳಿಗೆ ಕೊಡಲಿಕ್ಕೂ, ಇತರ ಚಿಲ್ಲರೆ ವೆಚ್ಚಕ್ಕೂ ವರ್ಷಂಪ್ರತಿ ನಗದೀ ಹಣವು ಕಯ್ಯಲ್ಲಿ ಬೇಕಾಗುವದು. ಇಲ್ಲದಿದ್ದರೆ ಕೆಲಸವು ಹೊತ್ತಿಗೆ ಸರಿಯಾಗಿ ಆಗುವದಿಲ್ಲ. ಹಾನಿಯಾಗುತ್ತದೆ. ಹಣ್ಣಿನ ಮರಗಳಿಂದ ಬಹುಶ: ಉತ್ಪನ್ನವು ಮೂರು ನಾಲ್ಕು ವರ್ಷಗಳ ವೊದಲು ಏನೂ ಬರುವದಿಲ್ಲ. ಅಲ್ಲಿಯ ವರೆಗೆ ತೋಟದ ವೆಚ್ಚವೆಲ್ಲ ಮೈಮೇಲೆ ಬೀಳುತ್ತದೆ. ಆದರೂ ಹಣ್ಣಿನ

ಗಿಡಗಳು ಸಣ್ಣವಿರುವಾಗ ಅಂದರೆ ಅವು ಫಲಕ್ಕೆ ಬರುವ ಮೊದಲು ಮೂರು ನಾಲ್ಕು ವರ್ಷ ಅವುಗಳ ನಡುವೆ ಯಾವದಾದರೊಂದು ಉಪ ಬೆಳೆಯನ್ನು ಬೆಳೆಸ ಬಹುದು. ಇದರಿಂದ ನಡುವಿನ ಜಾಗವು ವ್ಯರ್ಥ ಹೋಗುವದಿಲ್ಲ. ಸ್ವಲ್ಪವಾದರೂ ಉತ್ಪನ್ನವು ಬರುತ್ತದೆ. ಅದು ಪ್ರತಿ ವರ್ಷದ ಗೊಬ್ಬರ, ನೀರು, ಕಳೆ ತೆಗೆಯುವದು ಮುಂತಾದ ವುಗಳ ವೆಚ್ಚವನ್ನು ಮುಟ್ಟಿಸುತ್ತದೆ. ಗಿಡಗಳು ಬಲಿತು ಫಲಕ್ಕೆ ಬಂದ ಬಳಿಕ ಅವು ಗಳಿಂದ ಬರುವ ವರ್ಷಂಪ್ರತಿ ಉತ್ಪನ್ನವು ವೆಚ್ಚವನ್ನೆಲ್ಲ ಕಳೆದು ಮೊದಲು ಹಾಕಿದ ಮುದ್ದಲವನ್ನು ಬಡ್ಡಿ ಕೂಡಿಸಿ ತಿರುಗಿ ಕೊಡುತ್ತದೆ ಎಂಬದು ನಿಜವು. ಮಾತ್ರವಲ್ಲ. ಎಷ್ಟೋ ಪಟ್ಟು ಲಾಭ ಮಾಡಿ ಕೊಡುತ್ತದೆ. ಆದರೆ ಮೊದಲಿಗೆ ಬೇಕಾಗುವ ಹಣವು ಇಲ್ಲದಿದ್ದರೆ ನಡೆಯುವದು ಹ್ಯಾಗೆ? ಜಿರಾಯಿತ ಬೆಳೆಗಳಿಗಿಂತ ಹಣ್ಣಿನ ಗಿಡಗಳಿಗೆ ಎಷ್ಟೋ ಹೆಚ್ಚು ಭಾಂಡವಲು ಮೊದಲಿಗಂತೂ ಬೇಕೇ ಬೇಕು.

**ಆಳುಗಳು :**—ಹಣ್ಣಿನ ತೋಟದಲ್ಲಿ ಒಂದಲ್ಲ ಒಂದು ಕೆಲಸವು ಇಡೀ ವರ್ಷ ನಡೆದಿರುತ್ತದೆ. ಅಗೆಯುವದು, ಕಡಿಯುವದು, ನೀರು ಕೊಡುವದು, ಗೊಬ್ಬರ ಹಾಕುವದು, ಹುಲ್ಲು ಕಳೆ ತೆಗೆಯುವದು, ಮಣ್ಣು ಕೆದರುವದು ಕಾಯುವದು ಮುಂತಾದ ಕೆಲಸಗಳು ಒಂದರ ಹಿಂದೊಂದು ಬಂದೇ ಬರುತ್ತವೆ. ಇವಕ್ಕೆಲ್ಲ ಆಳುಗಳು ಯಾವಾಗಲೂ ಇರಬೇಕಾಗುತ್ತದೆ. ಕೆಲವು ಹಂಗಾಮಿನಲ್ಲಿ ಹೆಚ್ಚು ಹೋರೆ ಗಳಿರುವದರಿಂದ ಹೆಚ್ಚು ಆಳುಗಳು ಬೇಕಾಗುತ್ತವೆ. ಆದದರಿಂದ ಹಣ್ಣಿನ ತೋಟ ದಲ್ಲಿ ಅದರ ಮಾನಕ್ಕನುಸರಿಸಿ ಒಂದೆರಡು ಕುಟುಂಬಗಳನ್ನು ಮನೆ ಕಟ್ಟಿ ಇಟ್ಟಿರು ವದು ಉತ್ತಮ. ಹಂಗಾಮಿನಲ್ಲಿ ಬೇಕಾಗುವ ಹೆಚ್ಚಿನ ಆಳುಗಳನ್ನು ತತ್ಪೂರ್ತಿ ಕೂಲಿ ಕೊಟ್ಟು ತಂದುಕೊಳ್ಳ ಬಹುದು. ಹಂಗಾಮೀ ಆಳುಗಳೂ ಕೆಲವು ಸ್ಥಳ ಗಳಲ್ಲಿ ದೊರಕುವದಿಲ್ಲ. ಮತ್ತು ತೋಟದ ಕೆಲಸದ ಹಂಗಾಮಿನಲ್ಲೇ ಇತರ ಜಿರಾಯಿತ ಕಬ್ಬು ಮುಂತಾದವುಗಳ ಕೆಲಸವು ಜೋರಾಗಿ ಬಂದರೆ ಆಳುಗಳು ದೊರೆ ಯುವದು ಬಹಳ ಕಷ್ಟವಾಗುತ್ತದೆ.

ಇದಲ್ಲದೆ ತೋಟದೊಳಗಿನ ಕೆಲಸಕ್ಕೆ ಎಷ್ಟೋ ಸಾರೆ ವಿಶೇಷ ಜ್ಞಾನವಿರಬೇ ಕಾಗುತ್ತದೆ. ಅಂದರೆ ಜಿರಾಯಿತ ಪೈರುಗಳಂತೆ ಎಲ್ಲರೂ ಮಾಡಿದಂತೆ ಹೊಡುವ ಸಾಲು ಹೊಡಿ ಬಿತ್ತುವ ಬೀಜ ಬಿತ್ತಿದರಾಗಲಿಲ್ಲ. ಮರಗಳ ಅವಶ್ಯಕತೆಗಳನ್ನು ತಿಳಿದು ಯೋಗ್ಯ ಕಾಲದಲ್ಲಿ ಬೇರು ತೆರೆಯುವದು, ಕತ್ತರಿಸುವದು, ವಿಶ್ರಾಂತಿ ಕೊಡುವದು ಮುಂತಾದ ಕೆಲಸಗಳಿಗೆ ಹೆಚ್ಚಿನ ಅನುಭವವೂ ವಿಚಾರಬುದ್ಧಿಯೂ ಬೇಕಾಗುತ್ತವೆ. ಇವು ತೋಟದ ಯಜಮಾನನಿಗಂತೂ ಇರಲೇ ಬೇಕು. ಅವ ನಲ್ಲಿ ತನ್ನ ಆಳುಗಳಿಂದ ಯೋಗ್ಯ ಕಾಲದಲ್ಲಿ ಬೇಕಾದ ಕೆಲಸಗಳನ್ನು ಸರಿಯಾಗಿ ಮಾಡಿಸಿಕೊಳ್ಳುವೆನೆಂಬ ಭರವಸೆ ಇರಬೇಕು. ಮತ್ತು ಮಾಡಿಸಿಕೊಳ್ಳಬೇಕು.

ಹೊತ್ತು ಬಂದರೆ ತಾನೇ ಮೈ ಮುರಿದು ಮಾಡಲಿಕ್ಕೆ ಹಿಂದು ಮುಂದೆ ನೋಡ ಬಾರದು. ತನ್ನ ಒಬ್ಬಿಬ್ಬ ಆಳುಗಳನ್ನು ಸರಿಯಾಗಿ ಕಲಿಸಿ ತಿದ್ದಿದ ಬೇಕು. ಇಂಥ ವಿಶೇಷ ಕೆಲಸಕ್ಕೆ ಅವರು ಸಂಬಳವನ್ನು ತುಸು ಹೆಚ್ಚಾಗಿ ಬೇಡಿದರೆ ಕೊಡತಕ್ಕದ್ದು.

ತೋಟವನ್ನು ಮಾಡುವಾಗ ಆಳುಗಳು ದೊರೆಯುವವೋ ಇಲ್ಲವೋ ಎಂಬ ಪ್ರಶ್ನೆಯ ವಿಚಾರ ಮಾಡುವದು ಮಹತ್ವದ್ದಾಗಿರುತ್ತದೆ.

**ಬೇಲಿ:**—ಹಣ್ಣಿನ ತೋಟಗಳ ಸುತ್ತಲೂ ಬೇಲಿಯು ಅತ್ಯವಶ್ಯವು. ದನ ಕರುಗಳೂ ಕಾಡು ಪ್ರಾಣಿಗಳೂ ಹಾವಳಿ ಮಾಡಿ ಗಿಡಗಳನ್ನು ನಾಶ ಮಾಡದಂತೆ ಬೇಲಿ ಕಟ್ಟಬೇಕು. ತುಡುಗರು ಬಂದು ಬೆಲೆ ಬಾಳುವ ಗಿಡಗಳನ್ನು ಕಿತ್ತೊಯ್ಯ ಬಹುದು. ಹಣ್ಣು ಹಂಪಲಗಳನ್ನು ಹರಿದು ಒಯ್ಯ ಬಹುದು. ಇದಕ್ಕಾಗಿ ಮುಳ್ಳಿನ ತಂತಿಯು ಬೇಲಿಯು ಉತ್ತಮವೆನ್ನ ಬಹುದು. ಕಾಡು ಹಂದಿಗಳಿರುವ ಪ್ರದೇಶಗಳಲ್ಲಿ ಅಡ್ಡ ಸರಿಗೆಯನ್ನು ನೆಯ್ದು ಹಂದಿಯನ್ನು ಒಳಗೆ ಬರಗೊಡದ ತಂತಿಯ ಬೇಲಿಯನ್ನು ಕಟ್ಟಬಹುದು. ಕಲ್ಲಿನ ಗೋಡೆಯು ಬಹು ದಿನ ತಡೆ ಯುವದು. ಮುಳ್ಳು ಟೊಂಗೆಗಳನ್ನು ಹಾಕಿ ಬೇಲಿ ಕಟ್ಟುತ್ತಾರೆ. ಆದರೆ ಇವಕ್ಕೆ ಆಗಾಗ ದುರುಸ್ತಿಯು ಬೇಕಾಗುತ್ತದೆ ಮುಳ್ಳಿನ ಗಿಡಗಳನ್ನು ಒಂದ ಕ್ಕೊಂದು ಹತ್ತಿ ಸಾಲಾಗಿ ನೆಟ್ಟು ಬೆಳಿಸಿದರೆ ಉತ್ತಮ ಬೇಲಿಯುಂಟಾಗುತ್ತದೆ ಇಂಥ ಜೀವಂತ ಬೇಲಿಯನ್ನು ಐದು ಫೂಟು ಎತ್ತರವಾಗಿ ಗೋಡೆಯಂತೆ ಎರಡು ಫೂಟು ಅಗಲಾಗಿ ಆಗಾಗ ಕತ್ತರಿಸಿ ಇಟ್ಟರೆ, ಬಹಳ ಭದ್ರವಾದ ಬೇಲಿಯಾಗುತ್ತದೆ ಈ ಬೇಲಿಗೆ ಪತಂಗಿ ಎಂಬ ಗಿಡವು ಅತ್ಯುತ್ತಮವಾಗಿರುತ್ತದೆ.

ಇದಲ್ಲದೆ ಹಣ್ಣಿನ ಗಿಡಗಳನ್ನು ತೀರ ಬೈಲಾದ ಪ್ರದೇಶದಲ್ಲಿ ಬಿರುಗಾಳಿಗೊ ಟ್ಟಾಗಿ ನೆಟ್ಟಿದ್ದರೆ, ಗಾಳಿಯ ಜೋರಿಗೆ ಗಿಡಗಳು ಕಿತ್ತು ಬೀಳದಂತೆಯೂ, ಟೊಂಗೆ ಗಳು ಮುರಿಯದಂತೆಯೂ ಗಾಳಿಯ ದಿಕ್ಕಿನಲ್ಲಿ ಅಡ್ಡಾಗಿ ಚೊಗಚೆಯಂಥ ಎತ್ತರ ವಾಗಿ ತೀವ್ರ ಬೆಳೆಯುವ ಗಿಡಗಳನ್ನು ಸಾಲಾಗಿ ನೆಟ್ಟು ಬೇಲಿ ಮಾಡಬಹುದು ಈ ತರದ ಬೇಲಿಗಳು ಬಹಳ ದಪ್ಪವಾಗಿರಬಾರದು. ಅವುಗಳಿಂದ ತೋಟದಲ್ಲಿ ಗಾಳಿ ಯಾಡುವದು ಬಂದಾಗಬಾರದು. ಗಾಳಿಯ ಜೋರು ಮಾತ್ರ ಕಡಿಮೆಯಾದರೆ ನಾಕು. ಅವು ಎಂಟು ಹತ್ತು ಫೂಟಾದರೂ ಎತ್ತರವಾಗಿರಬೇಕು.

ತೋಟದೊಳಗೆ ಒಂದು ಭಾಗವನ್ನು ಇನ್ನೊಂದರಿಂದ ವಿಂಗಡಿಸುವದಕ್ಕಾಗಿ ಬೇಲಿ ಕಟ್ಟುವದಾದರೆ, ಅದು ಮುಳ್ಳು ಬೇಲಿಯಾಗುವ ಅವಶ್ಯವಿಲ್ಲ. ಡುರಾಂಟಾ, ಡೊಡೋನಿಯಾ ಎಂಬ ಗಿಡಗಳನ್ನು ಈ ಬೇಲಿಗಳಿಗೆ ಉಪಯೋಗಿಸ ಬಹುದು. ಈ ಗಿಡಗಳು ದಟ್ಟವಾಗಿ ತೀವ್ರ ಬೆಳೆಯುತ್ತವೆ. ಸರಿಯಾಗಿ ಕತ್ತರಿಸಿದರೆ ಚಂದ

ಕಾಣುತ್ತವೆ. ಇವಲ್ಲದೆ, ಪೇರಲ, ಡಾಳಿಂಬ ಮುಂತಾದ ಹಣ್ಣಿನ ಗಿಡಗಳನ್ನು ಸಾಲಿನಲ್ಲಿ ನೆಟ್ಟು ಅವುಗಳ ಟೊಂಗೆಗಳನ್ನು ಮನುಷ್ಯನು ಕೈ ನೀಡಿಸಿ ಮಾರು ಹಾಕುವಂತೆ ಎರಡೂ ಮಗ್ಗಲುಗಳಲ್ಲಿ ತಂತಿಗಳಿಗೆ ಕಟ್ಟಿ ಬೆಳೆಸಿದರೆ ಬಹು ಸುಂದರ ವಾಗಿ ಕಾಣುವ ಮತ್ತು ಉತ್ತಮ ಹಣ್ಣು ಕೊಡುವ ಬೇಲಿಗಳಾಗುತ್ತವೆ. ಇವು ತಯಾರಾಗಲಿಕ್ಕೆ ನಾಲ್ಕೈದು ವರ್ಷಗಳು ಹತ್ತುತ್ತವೆ. ತೋಟಿಗನಿಗೆ ಇದಕ್ಕೂ ಹೆಚ್ಚಿನ ಆನಂದವು ಏತರಿಂದಾಗುವದು ?

**ಗಿಡಗಳನ್ನು ನೆಡುವದು ಹ್ಯಾಗೆ ?**—ಹಣ್ಣಿನ ಗಿಡಗಳನ್ನು ಯೋಗ್ಯ ಅಂತರದ ಮೇಲೆ ಕುಣಿ ತೆಗೆದು ನೆಡಬೇಕು. ಬೇರೆ ಬೇರೆ ಜಾತಿಯ ಹಣ್ಣಿನ ಮರ ಗಳು ಮಧ್ಯ ವಯಸ್ಸಿನಲ್ಲಿ ಹೆಚ್ಚು ಕಡಿಮೆ ವಿಸ್ತಾರವಾಗಿ ಬೆಳೆಯುತ್ತವೆ. ಮಾವಿನ ಮರಗಳು ಬೆಳೆದಷ್ಟು ಪೇರಲ, ಡಾಳಿಂಬಗಳು ಬೆಳೆಯುವದಿಲ್ಲ. ಯಾವ ಗಿಡವನ್ನೇ ನೆಡುವದಾದರೂ ಅದು ಮುಂದೆ ಬೆಳೆದು ಮಧ್ಯ ವಯಸ್ಸಿನಲ್ಲಿ ಸುಮಾರು ಎಷ್ಟು ಜಾಗವನ್ನು ಆಕ್ರಮಿಸುವದು ಎಂಬದರ ಅಂದಾಜು ಮಾಡಿ ಎರಡು ಗಿಡಗಳ ನಡುವೆ ಅಷ್ಟು ಅಂತರವನ್ನಿಡಬೇಕು. ಅಂದರೆ ಮಾವಿನ ಮರಗಳು ಸುಮಾರು ಇಪ್ಪತ್ತು ವರ್ಷದವಾದಾಗ ಅವುಗಳ ಟೊಂಗೆಗಳ ವಿಸ್ತಾರವು ಇಪ್ಪತ್ತೈದು ಫೂಟು ಗಳಷ್ಟು ಆಗುವದೆಂದು ತಿಳಿದರೆ, ಮಾವಿನ ಗಿಡಗಳನ್ನು ಇಪ್ಪತ್ತೈದು ಫೂಟುಗಳಿ ಗೊಂದರಂತೆ ನೆಡಬೇಕು. ಗಿಡಗಳನ್ನು ಬಹಳ ಸಮೀಪ ನೆಟ್ಟರೆ, ಮುಂದೆ ಅವುಗಳ ಟೊಂಗೆಗಳು ಬೆಳೆದು ಒಂದರೊಳಗೊಂದು ಸೇರಿಕೊಳ್ಳುವದರಿಂದ ಮರಗಳ ಬೆಳೆ ವಣಿಗೆಯು ಕುಂದುವದಲ್ಲದೆ, ಉತ್ಪನ್ನವೂ ಕಡಿಮೆಯಾಗುತ್ತದೆ. ತೋಟದಲ್ಲಿ ಗಾಳಿ ಬಿಸಿಲುಗಳಿಗೆ ಆಸ್ಪದವಿರುವದಿಲ್ಲ. ರೋಗಾದಿಗಳು ಹೆಚ್ಚುತ್ತವೆ. ಮೊದಲೇ ಗಿಡಗಳ ಮಧ್ಯದಲ್ಲಿ ಯೋಗ್ಯ ಅಂತರವನ್ನಿಟ್ಟರೆ ಮುಂದೆ ಲಾಭವಾಗುತ್ತದೆ.

ಗಿಡಗಳನ್ನು ಸಾಲಾಗಿ ಎಲ್ಲ ಬದಿಗಳಲ್ಲೂ ಸರಿಯಾಗಿ ಒಂದೇ ಅಂತರವನ್ನಿಟ್ಟು ಅಂದರೆ ಚೌರಸ ರೀತಿಯಲ್ಲಿ ನೆಡುವದು ಬಹಳ ಉತ್ತಮ. ಈ ರೀತಿಯಲ್ಲಿ ಎಲ್ಲ ಗಿಡಗಳೂ ಎಲ್ಲ ಸಾಲುಗಳೂ ಒಂದೇ ಅಂತರದ ಮೇಲಿರುತ್ತವೆ. ಹೀಗೆ ನೆಟ್ಟರೆ ಎಲ್ಲ ಮರಗಳ ಬೆಳವಣಿಗೆಗೆ ಒಂದೇ ಸರಿಯಾಗಿ ಅವಕಾಶವು ದೊರೆಯುತ್ತದೆ. ತೋಟದಲ್ಲಿ ಹೂಡುವದು, ಹರಗುವದು, ಉಪ ಬೆಳೆಗಳನ್ನು ಬೆಳೆಸುವದು, ಹರಿಗ ಳನ್ನೂ ಮಡಿಗಳನ್ನೂ ಮಾಡುವದು, ಸುಲಭವಾಗುತ್ತದೆ. ಎಲ್ಲ ಕೆಲಸಗಳನ್ನು ಕಯ್ಯಿಂದ ಮಾಡಬೇಕಾಗುವದಿಲ್ಲ. ಎತ್ತುಗಳಿಂದ ಮಾಡಿಸಿಕೊಳ್ಳಬಹುದು. ಇದರಿಂದ ವೆಚ್ಚವು ಕಡಿಮೆಯಾಗುತ್ತದೆ. ಈ ರೀತಿಯಲ್ಲದೆ, ತ್ರಿಕೋಣ, ಚೌಕೋಣ, ಷಟ್ಕೋಣ ಮುಂತಾದ ರೀತಿಗಳಲ್ಲಿ ಗಿಡಗಳನ್ನು ನೆಡುವದುಂಟು. ಅವು ನಮ್ಮಲ್ಲಿಯ ಪರಿಸ್ಥಿತಿಗಳಿಗೆ ಸರಿಯಾಗಿಲ್ಲ.

**ಸ್ವಚ್ಛತೆ:—** ತೋಟವು ಯಾವಾಗಲೂ ಸ್ವಚ್ಛವಾಗಿರಬೇಕು. ಹುಲ್ಲು ಕಳೆಗಳು ಬೆಳೆದಿರಬಾರದು. ಅಲ್ಲಲ್ಲಿ ನೀರು ನೆಲೆಸಿರಬಾರದು. ಆಗಾಗ್ಗೆ ಹೂಡಿ ಹರಗಿ ಮಣ್ಣು ಸಡಿಲಾಗಿರುವಂತೆ ಎಚ್ಚರಪಡಬೇಕು. ಶಕ್ಯವಿದ್ದರೆ ಪ್ರತಿ ಸಾರೆ ನೀರು ಕೊಟ್ಟ ತರುವಾಯ ಗಿಡಗಳ ಮಡಿಗಳನ್ನೆಲ್ಲ ಕೆದರಿ ಮಣ್ಣನ್ನು ಸಡಿಲು ಮಾಡಬೇಕು ತಿಂಗಳಿಗೊಮ್ಮೆಯಾದರೂ ಮಡಿಗಳನ್ನು ಕೆದರಲೇ ಬೇಕು. ಗಿಡಗಳು ದೊಡ್ಡವಾದ ಬಳಿಕ ಎತ್ತುಗಳನ್ನು ಹಚ್ಚಿ ಹೂಡುವದು, ಹರಗುವದು, ಹರಿಗಳನ್ನು ಮಾಡುವದು ಮುಂತಾದ ಕೆಲಸಗಳನ್ನು ಮಾಡಿಸಿಕೊಳ್ಳುವದು ಶಕ್ಯವಿಲ್ಲ. ಈ ಕೆಲಸಗಳೆಲ್ಲ ಸಾಧಾರಣವಾಗಿ ಕಯ್ಯಿಂದಲೇ ಮಾಡಲ್ಪಡಬೇಕಾಗುತ್ತವೆ. ಹೂಡುವದರ ಬದಲು ನೆಲವನ್ನು ಅಗೆಯಬೇಕಾಗುತ್ತದೆ ಗಿಡಗಳ ಮೇಲೆ ಅನಾವಶ್ಯಕವಾದ, ಸತ್ತು ಹೋಗಿರುವ, ಅಥವಾ ಒಣಗಿರುವ ಟೊಂಗೆಗಳನ್ನು ಕಡಿದು ಹಾಕಬೇಕು. ಇಂಥ ಟೊಂಗೆಗಳಿಂದ ಗಿಡಗಳಿಗೆ ಉಪಯೋಗವೇನೂ ಇಲ್ಲ ಇಷ್ಟೇ ಅಲ್ಲ. ಅವು ವ್ಯರ್ಥವಾದ ಮತ್ತು ಅಪಾಯಕಾರಕವಾದ ಭಾರವಾಗಿರುತ್ತವೆ. ಒಣಗಿದ ಟೊಂಗೆಗಳು ಮಳೆಗಾಲದ ನೀರಿನಿಂದ ಕೊಳೆದು ಹುಳ ಹುಪ್ಪಡಿಗಳು ಬೆಳೆಯುವದಕ್ಕ ಆಸ್ಪದ ಕೊಡುತ್ತವೆ ಹುಲ್ಲು ಕಳೆ ಮುಂತಾದವು ತೋಟದಲ್ಲಿ ತುಂಬಿದ್ದರೆ ಗಿಡಗಳಿಗೆ ರೋಗವನ್ನು ಉಂಟು ಮಾಡುವ ಹುಳ ಹುಪ್ಪಡಿಗಳು ಬಹಳ ವೃದ್ಧಿಯಾಗುತ್ತವೆ ವನಸ್ಪತಿಜನ್ಯ ರೋಗಗಳು ಹೆಚ್ಚುತ್ತವೆ. ಇಲಿಗಳಿಗೂ, ಹಾವು ಹರಣೆಗಳಿಗೂ, ಹಂದಿ ಮಿಕ ಮುಂತಾದವುಗಳಿಗೂ ಸುಖದಿಂದ ಇರಲಿಕ್ಕೆ ಮನೆ ಮಾಡಿಕೊಟ್ಟಂತೆ ಇರುತ್ತದೆ ಹಣ್ಣಿನ ಗಿಡಗಳ ಮಧ್ಯದಲ್ಲಿ ಹುಲ್ಲು ಬೆಳೆದರೆ ದನಕರುಗಳ ಉಪಯೋಗಕ್ಕೆ ಬರಬಹುದೆಂಬದು ತೀರ ತಪ್ಪು. ಅದರಿಂದ ಲಾಭವಾಗುವದಕ್ಕಿಂತ ಎಷ್ಟೋ ಹೆಚ್ಚು ಹಾನಿಯಾಗುತ್ತದೆ ತೋಟದಲ್ಲಿ ಸೊಪ್ಪು ಗೊಬ್ಬರ ಮುಂತಾದವು ಸಿಕ್ಕಲ್ಲಿ ಸಿಕ್ಕ ಹಾಗೆ ಬಿದ್ದಿರಬಾರದು ಯೋಗ್ಯ ವ್ಯವಸ್ಥೆಯಿಂದ ನೇಮಿಸಿಟ್ಟ ಸ್ಥಳದಲ್ಲಿ ಒಟ್ಟಲ್ಪಡಬೇಕು ಸ್ವಚ್ಛತೆಯಿಂದ ಗಿಡಗಳ ಆರೋಗ್ಯವು ಬೆಳೆಯುತ್ತದೆ. ಹಣ್ಣು ಕಾಯಿಗಳು ಕೆಡುವದಿಲ್ಲ. ಮನಸ್ಸಿಗೆ ಆನಂದವಾಗುತ್ತದೆ. ಸ್ವಚ್ಛತೆಯೂ ಶಿಸ್ತೂ ಇದ್ದರೆ ಹಾನಿ ಏನೂ ಇಲ್ಲ. ಎಷ್ಟೋ ತರದಿಂದ ಲಾಭವಾಗುತ್ತದೆ.

**ಗೊಬ್ಬರ:—** ಗಿಡಗಳಿಗೆ ಗೊಬ್ಬರ ಹಾಕುವದು ಅವಶ್ಯವಾಗಿರುತ್ತದೆ ಸ್ವಾಭಾವಿಕವಾಗಿ ಬೆಳೆಯುವ ಗಿಡಗಳಿಗೆ ಗೊಬ್ಬರವು ಬೇಕಾಗದಿರಬಹುದು. "ಬೆಟ್ಟದಾ ತುದಿಯಲ್ಲಿ ಬೆಳೆದಿರ್ದ ಮರಗಳಿಗೆ ಕಟ್ಟೆಯನು ಕಟ್ಟಿ ನೆರೆ ನೀರೆರೆದರುಂಟೇ ?" ಇಲ್ಲ ಆದರೆ ಬೆಟ್ಟದ ಮರಗಳ ಬೆಳವಣಿಗೆಯೂ ಉತ್ಪನ್ನವೂ ಅಷ್ಟೇ. ಸಾಗು ಮಾಡಿ ಆದಷ್ಟು ಹೆಚ್ಚು ಲಾಭ ಮಾಡಿಕೊಳ್ಳಬೇಕು ಎಂದು

ಬೆಳೆಸಲ್ಪಡುವ ಗಿಡಗಳನ್ನು ತಮ್ಮಷ್ಟಕ್ಕೆ ತಾವೇ ಬೆಳೆಯಲು ಬಿಟ್ಟರೆ ಹ್ಯಾಗಾದೀತು? ಮತ್ತು ಈ ಗಿಡಗಳಿಂದ ಬರುವ ಉತ್ಪನ್ನವನ್ನು ತೆಗೆದುಕೊಳ್ಳುವ ನಾವು ಅವುಗಳ ಬೆಳವಣಿಗೆಗೆ ಏನಾದರೂ ತಿರುಗಿ ಕೊಡುವದು ಯೋಗ್ಯವೂ ಅವಶ್ಯವೂ ಅಲ್ಲವೋ?

ಗೊಬ್ಬರಗಳಲ್ಲಿ ಮುಖ್ಯವಾಗಿ ಎರಡು ವಿಧಗಳಿರುತ್ತವೆ ಒಂದು **ಸ್ವಾಭಾವಿಕ,** ಇನ್ನೊಂದು **ಕೃತ್ರಿಮ.** ಸ್ವಾಭಾವಿಕ ಗೊಬ್ಬರಗಳೆಂದರೆ ಸೆಗಣೀ ಗೊಬ್ಬರ, ಊರ ಗೊಬ್ಬರ (ಖಚರಾ), ಸೊಪ್ಪಿನ ಗೊಬ್ಬರ ಮುಂತಾದವು. ಇವು ಎಲ್ಲ ಅವಶ್ಯ ದ್ರವ್ಯಗಳಿಂದ ತುಂಬಿಕೊಂಡಿರುತ್ತವೆ. ಎಲ್ಲ ತರದ ಗಿಡಗಳಿಗೂ ಇವು ಅತ್ಯವಶ್ಯ. ಇವುಗಳಿಂದ ಆಗುವಷ್ಟು ಲಾಭವು ಇನ್ನ್ಯಾತರಿಂದಲೂ ಆಗಲಾರದು ಅದಕ್ಕಾಗಿ ಇವುಗಳಿಗೆ ಸಂಪೂರ್ಣ ಗೊಬ್ಬರಗಳೆನ್ನಬಹುದು

ಕೃತ್ರಿಮ ಗೊಬ್ಬರಗಳು ಹಾಗಲ್ಲ ಗಿಡಗಳ ಬೆಳವಣಿಗೆಗೆ ಬೇಕಾಗುವ ದ್ರವ್ಯಗಳನ್ನು ಪೃಥಕ್ಕರಿಸಿ ಮುಖ್ಯವಾಗಿ ಒಂದೊಂದೇ ದ್ರವ್ಯವನ್ನು ಒಂದೊಂದು ಗೊಬ್ಬರದಲ್ಲಿ ಇಟ್ಟಿರುತ್ತಾರೆ. ಇವುಗಳನ್ನು ಉಪಯೋಗಿಸಲು ಯಾವ ಗಿಡಗಳಿಗೆ ಯಾವ ದ್ರವ್ಯವು ಕಡಿಮೆಯಿಂದು ಕಂಡು ಬರುತ್ತದೋ ಆ ಗಿಡಗಳಿಗೆ ಅದೇ ದ್ರವ್ಯದ ಗೊಬ್ಬರವನ್ನು ಕೊಡತಕ್ಕದ್ದು ಎಂಬ ತತ್ವವನ್ನು ಅನುಸರಿಸಬೇಕು ಈ ಗೊಬ್ಬರಗಳನ್ನು ವೈದ್ಯನು ಕೊಟ್ಟ ಔಷಧಗಳಂತೆ ಉಪಯೋಗಿಸತಕ್ಕದ್ದು ಇವು ಸ್ವಾಭಾವಿಕ ಗೊಬ್ಬರಗಳಿಗೆ ಪೂರಕವಾಗಿರಬೇಕು. ಸ್ವಾಭಾವಿಕ ಗೊಬ್ಬರಗಳಿಲ್ಲದೆ ಇವನ್ನಷ್ಟೇ ಉಪಯೋಗಿಸಲಿಕ್ಕೆ ಬರುವಂತಿಲ್ಲ. ವೈದ್ಯನು ಕೊಟ್ಟ ಲೋಹವನ್ನು ತಿನ್ನುತ್ತೇನೆ ಎಂದು ಉಣ್ಣುವದನ್ನೂ ಹಾಲು ಕುಡಿಯುವದನ್ನೂ ಬಿಟ್ಟರೆ ಹ್ಯಾಗಾದೀತು? ಕೃತ್ರಿಮ ಗೊಬ್ಬರಗಳಲ್ಲಿ ಸಲ್ಫೇಟ ಆಫ್ ಎಮೋನಿಯಾ, ನಾಯಟ್ರೇಟ್ ಆಫ್ ಸೋಡಾ ಇವು ನೈಟ್ರೋಜನ ದ್ರವ್ಯವನ್ನು ಪೂರೈಸಿ ಎಲೆ ಟೊಂಗೆಗಳು ಜೋರಿನಿಂದ ಬೆಳೆಯುವಂತೆ ಮಾಡುತ್ತವೆ ಇವು ಗಿಡಗಳ ಶರೀರಕ್ಕೆ ಬಹು ಪೌಷ್ಟಿಕವು. ಸುಪರ್ ಫೋಸ್ಫೇಟ್, ಬೋನ್ ಮೀಲ್ (ಎಲುಬಿನ ಹುಡಿ) ಮುಂತಾದವು ಫೋಸ್ಫರಸ್ ಎಂಬ ದ್ರವ್ಯವನ್ನು ಹೆಚ್ಚಿಸಿ ಗಿಡಗಳಲ್ಲಿ ಹೂ ಕಾಯಿಗಳು ಹೆಚ್ಚಾಗುವಂತೆಯೂ ಅವು ಪುಷ್ಟಿಯಾಗುವಂತೆಯೂ ಮಾಡುತ್ತವೆ ಸಲ್ಫೇಟ್ ಆಫ್ ಪೊಟೇಶ್ ಎಂಬದು ಪೊಟೇಶ್ ದ್ರವ್ಯವನ್ನು ಪೂರೈಸುತ್ತದೆ ಈ ಎರಡು ದ್ರವ್ಯಗಳಿಂದ ಗಿಡದ ಎಲೆ ಟೊಂಗೆಗಳ ಜೋರು ತುಸು ಕಡಿಮೆಯಾಗಿ ಹೂ ಕಾಯಿಗಳು ಹೆಚ್ಚುತ್ತವೆ. ಈ ಎಲ್ಲ ದ್ರವ್ಯಗಳನ್ನು ಹೆಚ್ಚುಕಡಿಮೆ ಪ್ರಮಾಣದಲ್ಲಿ ಕೂಡಿಸಿ ಕೊಡುವದು ಉಂಟು.

ನಮ್ಮ ದೇಶದಲ್ಲಿ ಹಿಂಡಿ, ಎಲುಬು, ಕೃತ್ರಿಮ ಗೊಬ್ಬರ ಮುಂತಾದವು ಗಳನ್ನು ಸಾಕಷ್ಟು ಉಪಯೋಗಿಸುತ್ತಿರುವದಿಲ್ಲ ಹೊನ್ನೆಕಾಯಿ, ಔಡಲ, ಕುಸಬಿ ಮುಂತಾದವುಗಳಿಂದ ಎಣ್ಣೆ ತೆಗೆದ ಬಳಿಕ ಸಿಗುವ ಹಿಂಡಿಗಳನ್ನೂ, ಪ್ರತಿಯೊಂದು ಹಳ್ಳಿಯಲ್ಲೂ ಅಲ್ಲಲ್ಲಿ ಬಿದ್ದಿರುವ ಸತ್ತ ಪ್ರಾಣಿಗಳ ಎಲುಬುಗಳನ್ನೂ ಕಾಳಜಿಯಿಂದ ಕಾದಿಟ್ಟು ಗಿಡಗಳಿಗೆ ಗೊಬ್ಬರವೆಂದು ಉಪಯೋಗಿಸಿದರೆ ಬಹಳ ಲಾಭವಾಗ ಬಹುದು. ಸಮುದ್ರ ದಂಡೆಯಲ್ಲೂ ಹೊಳೆಗಳ ದಂಡೆಗಳಲ್ಲೂ ಮೀನು ಬೇಕಷ್ಟಿ ರುವದು. ಇದನ್ನು ಹೂಳಿದರೆ ಉತ್ತಮ ಗೊಬ್ಬರವು ದೊರೆಯುತ್ತದೆ. ಆದರೆ ನಮ್ಮ ದೇಶದಲ್ಲಿಯ ಉತ್ತಮ ಗೊಬ್ಬರವಾದ ಸಗಣೀ ಗೊಬ್ಬರವನ್ನು ಕೂಡ ಸರಿ ಯಾಗಿ ಕೂಡಿ ಹಾಕಿ ಇಟ್ಟು ಅದರಿಂದ ಆಗಬೇಕಾದ ಲಾಭವನ್ನು ಸಂಪೂರ್ಣ ವಾಗಿ ನಾವು ಪಡೆಯುವದಿಲ್ಲ. ಸಗಣಿಯಿಂದ ಬೆರಣಿ ಕುಳ್ಳುಗಳನ್ನು ಮಾಡಿ ಸುಟ್ಟು ಬಿಡುತ್ತೇವೆ. ಅಂದಮೇಲೆ ಇತರ ಗೊಬ್ಬರಗಳನ್ನು ಉಪಯೋಗಿಸಿ ಅವೆಲ್ಲವುಗಳಿಂದ ಸರಿಯಾಗಿ ಲಾಭ ಹೊಂದುವ ದಿನಗಳು ಬರುವದು ಎಂದು?

ಹಣ್ಣಿನ ಗಿಡಗಳಿಗೆ ಪ್ರಥಮದಲ್ಲಿ ನೆಡುವಾಗ ಕುಣಿಯಲ್ಲಿ ಸಗಣೀ ಗೊಬ್ಬರ ವನ್ನೂ, ತುಸು ಎಲುಬಿನ ಹುಡಿ, ಮತ್ತು ಸಲ್ಫೇಟ್ ಆಫ್ ಎಮೋನಿಯಾವನ್ನೂ ಕೊಡುವದು ಒಳ್ಳೇದು, ಇದರಿಂದ ಸಣ್ಣ ಗಿಡಗಳು ಜೋರಿನಿಂದ ಬೆಳೆಯುತ್ತವೆ. ಮುಂದೆ ಗಿಡಗಳು ದೊಡ್ಡವಾದಂತೆ ವರ್ಷಕ್ಕೊಮ್ಮೆ ಮಳೆಗಾಲದ ಸುರುವಿಗೆ ಗೊಬ್ಬರವನ್ನು ಹಾಕಿದರೆ ಸಾಕು. ಕಿತ್ತಳೆ, ಡಾಳಿಂಬ, ಪೇರಲ ಮುಂತಾದವು ಗಳಿಗೆ ಬೇರುಗಳನ್ನು ತೆಗೆದು ಗಿಡಗಳಿಗೆ ವಿಶ್ರಾಂತಿ ಕೊಟ್ಟ ಬಳಿಕ, ನೀರು ಕೊಡು ವಾಗ ಗೊಬ್ಬರವನ್ನು ಕೊಡುವದು ಉತ್ತಮ. ಹೂವಾಗುವ ಸಮಯದಲ್ಲಿ ನೈಟ್ರೋಜನ್ ಗೊಬ್ಬರಗಳನ್ನು ಕೊಡಬಾರದು.

**ಉಪ ಬೆಳೆಗಳು:**—ಸಾಮಾನ್ಯವಾಗಿ ಹಣ್ಣಿನ ಗಿಡಗಳು ನಾಲ್ಕೈದು ವರ್ಷ ಗಳ ವರೆಗೆ ಏನೂ ಉತ್ಪನ್ನವನ್ನು ಕೊಡುವದಿಲ್ಲವೆನ್ನಬಹುದು. ಅವು ಸಣ್ಣವಿರು ವದರಿಂದ ಅವುಗಳ ನಡುವಿನ ಅಂತರದಲ್ಲಿ ಇನ್ನೇನಾದರೂ ವಾರ್ಷಿಕ ಬೆಳೆಗಳನ್ನು ಬೆಳೆಸಿಕೊಳ್ಳುತ್ತಾರೆ. ಇದರಿಂದ ಯಜಮಾನನಿಗೆ ಅಲ್ಪ ಸ್ವಲ್ಪ ಉತ್ಪನ್ನವು ಬರುತ್ತದೆ. ಈ ಉಪ ಬೆಳೆಗಳೆಂದರೆ ಬೆಂಡೆ, ಚವಳಿ, ಬದನೆ, ಮೆಣಸು, ಕುಂಬಳ, ಕೋಬಿ, ನವಲಕೋಲ ಮುಂತಾದ ಪಲ್ಲೆಕಾಯಿಗಳು, ಮತ್ತು ವಟಾಣೆ, ನೆಲಗಡ್ಲೆ ಮುಂತಾದವು. ಈ ಬೆಳೆಗಳನ್ನು ಆರಿಸುವದರಲ್ಲಿ ಲಕ್ಷ್ಯದಲ್ಲಿ ತರಬೇಕಾದ ಸಂಗ ತಿಗಳು ಯಾವವೆಂದರೆ, (೧) ಉಪ ಬೆಳೆಗಳಿಗೆ ಇಡೀ ವರ್ಷ ನೀರು ಬೇಕಾಗ ಬಾರದು, (೨) ಉಪ ಬೆಳೆಗಳು ಇಡೀ ವರ್ಷ ಬೆಳೆಯುತ್ತಿರಬಾರದು, ನಾಲ್ಕಾರು ತಿಂಗಳುಗಳಲ್ಲಿ ಮುಗಿದು ಹೋಗಬೇಕು. ಉಳಿದ ನಾಲ್ಕಾರು ತಿಂಗಳು ಹೊಲವು

ಬಿಸಿಲು ಗಾಳಿಗಳ ಹೊಡತಕ್ಕೆ ತೆರೆದಿರಬೇಕು. (೩) ಉಪಬೆಳೆಗಳು ದಟ್ಟವಾದ ನೆರಳು ಕೊಟ್ಟು ಹಣ್ಣಿನ ಗಿಡಗಳನ್ನು ಮುಚ್ಚುವಂಥವಿರಬಾರದು. ಯಾಕೆಂದರೆ, ಇಡೀ ವರ್ಷ ನೀರುಣ್ಣುವಂಥ ಬೆಳೆಗಳಿಂದ ನೆಲವು ಕೆಡುವದಲ್ಲದೆ ಹಣ್ಣಿನ ಗಿಡಗಳಿಗೆ ಬೇಕಾಗುವದಕ್ಕಿಂತ ಹೆಚ್ಚು ನೀರು ಸಿಕ್ಕು ಅವುಗಳ ಆರೋಗ್ಯವು ಕೆಡುತ್ತದೆ. ನೆಲದಲ್ಲಿ ಹವೆಯಾಡುವದಿಲ್ಲ. ಇಡೀ ವರ್ಷ ಬೆಳೆಯುತ್ತಿರುವ ಉಪ ಬೆಳೆಗಳಿಂದ ನೆಲಕ್ಕೆ ವಿಶ್ರಾಂತಿಯು ದೊರೆಯುವದಿಲ್ಲ. ಹೂಡುವದಕ್ಕೂ ಹರಗುವದಕ್ಕೂ ಅನುಕೂಲವಿರುವದಿಲ್ಲ. ನೆರಳು ಕೊಡುವ ಬೆಳೆಗಳಿಂದ ಹಣ್ಣಿನ ಗಿಡಗಳಿಗೆ ಬೇಕಷ್ಟು ಬಿಸಿಲು ಗಾಳಿಗಳು ದೊರೆಯುವದಿಲ್ಲ. ಅದರಿಂದ ಅವುಗಳ ಬೆಳವಣಿಗೆಯು ಕುಂದುತ್ತದೆ. ಮತ್ತು ಅವು ಬಹಳ ಅಶಕ್ತವಾಗುತ್ತವೆ. ಒಟ್ಟಿಗೆ ಉಪ ಬೆಳೆಗಳಿಂದ ಮುಖ್ಯ ಬೆಳೆಗೆ ಏನೂ ತೊಂದರೆಯಾಗಬಾರದು ಮತ್ತು ಮುಖ್ಯ ಬೆಳೆಯಾದ ಹಣ್ಣಿನ ಗಿಡಗಳು ದೊಡ್ಡವಾಗಿ ಫಲಕ್ಕೆ ಬಂದು ನೆಲವನ್ನು ಆಕ್ರಮಿಸಿದ ಬಳಿಕ ಉಪ ಬೆಳೆಗಳ ಗೋಜಿಗೇ ಹೋಗಬಾರದು

**ರೋಗಾದಿಗಳು:**—ಹಣ್ಣಿನ ಗಿಡಗಳನ್ನು ಸರಿಯಾಗಿ ಶಿಸ್ತಿನಿಂದ ನೆಟ್ಟು ಅವುಗಳ ವ್ಯವಸ್ಥೆಯನ್ನು ಸರಿಯಾಗಿಟ್ಟರೆ ರೋಗಗಳೂ ಹುಳಗಳೂ ಎಷ್ಟೋ ಮಟ್ಟಿಗೆ ಕಡಿಮೆಯಾಗುತ್ತವೆ. ರೋಗಗಳಾದ ಬಳಿಕ ಉಪಾಯ ಮಾಡುವದಕ್ಕಿಂತ ಮೊದಲೇ ರೋಗಗಳಾಗದಂತೆ ಎಚ್ಚರವಡುವದು ಲೇಸು. ಆದಾಗ್ಯೂ ಎಷ್ಟೋ ರೋಗಗಳು ಒಂದಿಲ್ಲೊಂದು ಕಾರಣದಿಂದ ಬಂದೇ ಬರುತ್ತವೆ. ಅವು ಬಂದದ್ದು ತಿಳಿದ ಕೂಡಲೆ ಯೋಗ್ಯ ಉಪಾಯವನ್ನು ಮಾಡಿ ಮುಂದೆ ಪಸರಿಸದಂತೆ ಮಾಡಬೇಕು. ಒಮ್ಮೆ ಯಾವದೊಂದು ರೋಗವು ಗಿಡಗಳನ್ನು ವ್ಯಾಪಿಸಿದ ಬಳಿಕ ಅದನ್ನು ಹಿಮ್ಮೆಟ್ಟಿಸುವದು ಸುಲಭವಲ್ಲ. ಬೇರೆ ಬೇರೆ ತರದ ಗಿಡಗಳಿಗೆ ಬೇರೆ ಬೇರೆ ತರದ ರೋಗಗಳೂ ಹುಳಗಳೂ ಆಗುತ್ತವೆ ಅವುಗಳನ್ನೆಲ್ಲ ಆಯಾ ಗಿಡಗಳ ಸಾಗುವಳಿಯಲ್ಲಿ ಬರೆದಿರುತ್ತೇವೆ. ಆದಾಗ್ಯೂ ರೋಗಗಳಾದ ಕೂಡಲೆ ಸಮೀಪದಲ್ಲಿರುವ ಬೇಸಾಯ ಖಾತೆಯ ಓವ್ಹರಸೀಯರ, ಫಾರ್ಮ ಸುಪರಿಂಟೆಂಡೆಂಟ, ಕಾಮಗಾರ ಮುಂತಾದವರಿಗೆ ತಿಳಿಸಿ ಯೋಗ್ಯ ಸಲಹೆಯನ್ನು ತೆಗೆದುಕೊಂಡು ಉಪಾಯ ಮಾಡುವದು ಒಳ್ಳೆದು. ಹಣ್ಣಿನ ಗಿಡಗಳ ವಿಷಯದಲ್ಲಿ ಮ॥ ಹಾರ್ಟಿಕಲ್ಚರಿಸ್ಟ ಸಾಹೇಬ, ಬೇಸಾಯ ಕಾಲೇಜ, ಪುಣೆ, ಇವರಿಗೆ ಬರೆದುಕೊಂಡರೆ, ಕೂಡಲೆ ಯೋಗ್ಯ ಸಲಹೆಯು ಪತ್ರದ್ವಾರದಿಂದಾಗಲಿ, ಸ್ವತಃ ಬಂದು ಪರೀಕ್ಷಿಸಿ ಆಗಲಿ, ದೊರೆಯುವದು.

**ಕಾವಲು :**—ಹಣ್ಣಿನ ಗಿಡಗಳು ಹೂ ಬಿಟ್ಟು, ಮಿಡಿಗಳು ದೊಡ್ಡವಾದ ಬಳಿಕ ಅವು ಪಾಡಾಗಿ ಹರಿದುಕೊಳ್ಳುವ ತನಕ ಹಕ್ಕಿ ಪಕ್ಷಿಗಳಾಗಲಿ, ಬಾವುಲಿಗಳಾ

ಗಲಿ, ತುಡುಗರಾಗಲಿ ಅವನ್ನು ನಾಶ ಮಾಡದಂತೆ ಕಾಯಬೇಕಾಗುವದು. ತೋಟದಲ್ಲಿ ಒಂದೆರಡು ಸ್ಥಳಗಳಲ್ಲಿ ಮಾಳವನ್ನು ಎತ್ತರವಾಗಿ ಹಾಕಿ ಅಲ್ಲಿಂದ ಕವಣಿ ಕಲ್ಲುಗಳನ್ನು ಬೀಸುವವರಿಂದ ಹಕ್ಕಿಗಳನ್ನೂ ಕಾಡು ಪ್ರಾಣಿಗಳನ್ನೂ ಓಡಿಸಬಹುದು. ರಾತ್ರಿಯಲ್ಲೂ ಹಗಲಿನಲ್ಲೂ ತಿರುಗಾಡುತ್ತಿದ್ದು ತುಡುಗರಿಂದ ಹಣ್ಣುಗಳನ್ನು ರಕ್ಷಿಸಿಕೊಳ್ಳಬೇಕು. ಈ ಎಲ್ಲ ಕೆಲಸಕ್ಕೆ ಪ್ರತಿ ಒಂದು ಬೆಳೆಯೂ ಪಾಡಾಗುವಾಗ ಒಂದೆರಡು ತಿಂಗಳಪೂರ್ತಿ ಕಾವಲು ಇಡುವದು ಅವಶ್ಯ. ಆದರೆ, ಬೇಲಿ ಎದ್ದು ಹೊಲವನ್ನು ಮೇಯಬಾರದು ಎಂಬಂತೆ ಕಾವಲಿಟ್ಟ ಮನುಷ್ಯನು ಯಜಮಾನನಿಗೆ ಮೋಸಮಾಡಿ ತನ್ನ ಲಾಭ ಮಾಡಿಕೊಳ್ಳಬಾರದು. ನಿಷ್ಕಾಳಜಿಯವನನು, ಯಜಮಾನನ ಕಣ್ಣು ತಪ್ಪಿಸಿ ಹಣ್ಣುಗಳನ್ನು ಮಾರಿ ದುಡ್ಡು ಮಾಡಿಕೊಳ್ಳುವವನನೂ ಆದ ಕಾವಲುಗಾರನನ್ನು ಇಟ್ಟರೆ ಲಾಭವೇನು? ಕಾವಲುಗಾರನು ತನ್ನ ಕೆಲಸವನ್ನು ಸರಿಯಾಗಿ ಮಾಡುತ್ತಾನೋ ಇಲ್ಲವೋ ಎಂಬದನ್ನು ಯಜಮಾನನು ಸೂಕ್ಷ್ಮರೀತಿಯಿಂದ ಪರೀಕ್ಷಿಸಿ ಆಗಾಗ್ಗೆ ನೋಡುತ್ತಿರಬೇಕು ಮತ್ತು ಕಾವಲುಗಾರನನ್ನು ಯಾವಾಗಲೂ ಸಂತೋಷಪಡಿಸಿ ಇಟ್ಟಿರಬೇಕು.

**ಲೆಖ್ಖಪತ್ರ :**—ಹಣ್ಣಿನ ತೋಟದಲ್ಲಿ ಎಷ್ಟು ವೆಚ್ಚವು ಯಾವ ಯಾವ ಸಂಗತಿಗಳ ಮೇಲೆ ಬರುತ್ತದೆ? ಅದರಿಂದ ಉತ್ಪನ್ನವು ಎಷ್ಟು ಬರುತ್ತದೆ? ಹಣ್ಣುಗಳಿಗೆ ಬೆಲೆಯು ಯಾವ ದರದಿಂದ ಬರುತ್ತದೆ? ಒಟ್ಟಿನ ಮೇಲೆ ತೋಟದಿಂದ ಲಾಭವಾಗುತ್ತದೋ ಹಾನಿಯಾಗುತ್ತದೋ? ಯಾವ ಜಿನಸುಗಳನ್ನು ಮಾರಿದರೆ ದುಡ್ಡು ಹುಟ್ಟುತ್ತದೆ? ಎಂಬದನ್ನೆಲ್ಲ ಸೂಕ್ಷ್ಮವಾಗಿ ತಿಳುಕೊಳ್ಳುವದಕ್ಕಾಗಿ ತೋಟದ ಪ್ರತಿಯೊಂದು ವೆಚ್ಚವನ್ನೂ ಆದಾಯವನ್ನೂ ಬರೆದಿಡಬೇಕು. ಇವನ್ನೆಲ್ಲ ಆಗಾಗ ನೋಡಿ ಎಲ್ಲಿ ಹೆಚ್ಚುಕಡಿಮೆ ಮಾಡಿ ಉಳಿತಾಯ ಮಾಡಿಕೊಳ್ಳುವದು ಸಾಧ್ಯವಿರುತ್ತದೆ ಎಂಬದರ ಅನುಭವವನ್ನು ಮಾಡಿಕೊಳ್ಳಬೇಕು. ಲೆಖ್ಖಪತ್ರವನ್ನು ಇಡದಿದ್ದರೆ ತೋಟದಿಂದಾಗುವ ಲಾಭ ಹಾನಿಗಳು ತಿಳಿಯುವದಿಲ್ಲ. ಲೆಖ್ಖಪತ್ರದಲ್ಲಿ ಬರೇ ದುಡ್ಡು ಕೊಟ್ಟದ್ದು ದುಡ್ಡು ಬಂದದ್ದು ಇವುಗಳನ್ನು ಬರೆದಿಟ್ಟರೆ ಸಾಲದು. ಮನೆ ಖರ್ಚಿಗಾಗಿ ಹುಲ್ಲು, ಹಣ್ಣು, ಪಲ್ಲೆಕಾಯಿ, ಮುಂತಾದವುಗಳನ್ನು ಉಪಯೋಗಿಸಿದ್ದರೆ, ಅವನ್ನೂ ಅವುಗಳ ಅಜಮಾಸಿನ ಬೆಲೆಯನ್ನೂ ಉತ್ಪನ್ನದಲ್ಲಿ ಬರೆಯಲೇ ಬೇಕು ಅದರಂತೆ ಸ್ವತಃ ಕೆಲಸ ಮಾಡಿದ್ದಕ್ಕೂ ಮನೆಯವರು ಕೆಲಸ ಮಾಡಿದ್ದಕ್ಕೂ ಯೋಗ್ಯ ಕೂಲಿಯನ್ನು ಗುಣಿಸಿ ವೆಚ್ಚದಲ್ಲಿ ಬರೆಯಬೇಕು ಹೀಗೆ ಸೂಕ್ಷ್ಮ ರೀತಿಯಿಂದ ಹೊಲದ ಇಲ್ಲವೆ ತೋಟದ ಲೆಖ್ಖಪತ್ರವನ್ನು ಇಡುವ ಅಭ್ಯಾಸವು ನಮ್ಮ ಒಕ್ಕಲಿಗರಿಗೆ ಇರುವದಿಲ್ಲ. ಅವರು ಹೊಲಮನೆಯ ಉದ್ಯೋಗವು ಒಂದು ಧಂದೆಯೆಂದು ತಿಳಿಯುವದಿಲ್ಲ. ಹ್ಯಾಗಾದರೂ ಮನೆಯ

ವರೆಲ್ಲ ಇಡೀ ವರ್ಷಕಾಲ ದುಡಿಯುತ್ತಾರೆ ಬಂದಷ್ಟರಿಂದ ಜೀವಿಸುತ್ತಾರೆ. ಅದು ಸಾಲದಿದ್ದರೆ ಸಾಲ ತರುತ್ತಾರೆ! ಹೀಗೆ ನಮ್ಮ ಬಡ ಒಕ್ಕಲಿಗರ ಜೀವನ ಕ್ರಮವು ನಡೆದಿರುತ್ತದೆ. ಆದದರಿಂದ ಒಕ್ಕಲತನದಲ್ಲಿ ಸುಧಾರಣೆಯನ್ನು ಮಾಡುವದೂ ಒಕ್ಕಲಿಗನ ಸ್ಥಿತಿಯನ್ನು ಊರ್ಜಿತಗೊಳಿಸುವದೂ ಬಹು ಕಷ್ಟವಾಗಿದೆ. ಒಕ್ಕಲಿಗರೆಲ್ಲ ಸಾಮಾನ್ಯವಾಗಿ ಸಾಲಂಡಿಗರಾಗಿ ಹೊಲಮನೆಯನ್ನು ಒತ್ತಿ ಹಾಕಿ ಕೂಲಿ ಕೆಲಸಕ್ಕೆ ಹೋಗ ಹತ್ತಿದ್ದಾರೆ!!

**ಗಿರಾಕಿಗಳು :—** ಗಿಡಗಳು ಫಲಕ್ಕೆ ಬಂದ ಬಳಿಕ ಹಣ್ಣು ಕಾಯಿಗಳನ್ನು ಮಾರುವದು ಹ್ಯಾಗೆ ಎಂಬ ಮಹತ್ವದ ಪ್ರಶ್ನೆಯು ಮುಂದೆ ಬರುತ್ತದೆ. ಇಡೀ ತೋಟವನ್ನೇ ಯಾರಾದರೊಬ್ಬ ದಲಾಲನಿಗೆ ಆಗಲಿ ಕಂತ್ರಾಟದಾರನಿಗೆ ಆಗಲಿ ಒಂದು ಬೆಳೆಯ ಪೂರ್ತೆಗೆ ಮಾರುವ ಪದ್ಧತಿಯಿರುತ್ತದೆ. ಒಂದೇ ಊರಲ್ಲಿ ಅಥವಾ ಸಮೀಪದಲ್ಲಿ ಅನೇಕ ತೋಟಗಳಿದ್ದರೆ, ಗಿರಾಕಿಗಳು ತಾವಾಗಿ ಬಂದು ತೋಟವನ್ನು ಕೇಳುತ್ತಾರೆ. ಇಲ್ಲದಿದ್ದರೆ ತೋಟಿಗನು ಸ್ವತಃ ಹಣ್ಣುಗಳನ್ನು ಹರಿದು ತುಂಬಿ ಪೇರಿಗೆ ಕಳಿಸಬೇಕಾಗುತ್ತದೆ. ಇಡೀ ಬೆಳೆಯನ್ನು ಮಾರಿಬಿಡುವದರಿಂದ ಕಾಯುವದು, ಹರಿಯುವದು, ತುಂಬಿ ಕಳಿಸುವದು ಮುಂತಾದ ಕೆಲಸಗಳೆಲ್ಲ ಕಡಿಮೆಯಾಗುತ್ತವೆ. ಮತ್ತು ಕಂತ್ರಾಟದಾರನಿಂದ ದುಡ್ಡು ಒಂದೇ ಗಂಟಿನಿಂದ ದೊರೆಯುತ್ತದೆ. ಆದರೆ ಎಷ್ಟೋ ಸಾರೆ ಪೇರೆಯಲ್ಲಿ ಸ್ವತಃ ಮಾರಿದ್ದಕ್ಕಿಂತ ಕಡಿಮೆ ಬೆಲೆಯು ಬರುತ್ತದೆಂಬದು ಸಹಜ.

ಎಷ್ಟೋ ಕಂತ್ರಾಟದಾರರು ಒಕ್ಕಲಿಗನ ಅಡಚಣಿಯ ಹೊತ್ತಿನಲ್ಲಿ ಮುಂಗಡ ದುಡ್ಡು ಕೊಟ್ಟು, ಅವನ ಬೆಳೆಯನ್ನು ಬಹಳ ಕಡಿಮೆ ಬೆಲೆಗೆ ಕೊಳ್ಳುವ ಕರಾರು ಮಾಡಿಕೊಳ್ಳುತ್ತಾರೆ. ಇದರಿಂದ ಒಕ್ಕಲಿಗನಿಗೆ ಬಹಳ ಹಾನಿಯಾಗುತ್ತದೆ. ಆದಷ್ಟು ಪ್ರಯತ್ನದಿಂದ ಕಂತ್ರಾಟದಾರನ ಕಯ್ಯಲ್ಲಿ ಸಿಕ್ಕು ಬೀಳದಂತೆ ಒಕ್ಕಲಿಗನು ಯತ್ನಿಸಬೇಕು. ಹಂಗಾಮಿನಲ್ಲಿ ಯೋಗ್ಯ ಬೆಲೆಗೆ ಯೋಗ್ಯ ಮನುಷ್ಯನಿಗೆ ತನ್ನ ಬೆಳೆಯನ್ನು ಮಾರಬೇಕು.

**ಮಾರಾಟದ ಅನುಕೂಲತೆಗಳು :—** ತೋಟದಿಂದ ಪೇರೆಗೆ ಹಣ್ಣುಗಳು ಕೆಡದಂತೆ ಕಳಿಸುವದು ಕಠಿನವಾಗುತ್ತದೆ. ಇದಕ್ಕೆ ಅಲ್ಲಲ್ಲಿ ಯೋಗ್ಯ ಅನುಕೂಲತೆಗಳು ಬೇಕೇ ಬೇಕು. ತೋಟದಲ್ಲಿ ಹರಿದ ಕೂಡಲೆ ಹಣ್ಣುಗಳನ್ನು ಬುಟ್ಟಿಗಳಲ್ಲಾಗಲಿ ಪೆಟ್ಟಿಗೆಗಳಲ್ಲಾಗಲಿ ನೋವಾಗದಂತೆ ಮತ್ತು ಅಗಲಾದದಂತೆ ತುಂಬಿ ಬಂದು ಮಾಡಿ ಮೋಟಾರುಗಳಲ್ಲಾಗಲಿ ಎತ್ತಿನ ಬಂಡಿಗಳಲ್ಲಾಗಲಿ ಹೇರಿ ಕಳಿಸಬೇಕು. ರೈಲ್ವೆ ಸ್ಟೇಶನ್ನುಗಳಿಗೆ ಆದಷ್ಟು ಮೊದಲು ಬಿಡುವ ಗಾಡಿಗೆ ಸಾ

ಯಾಗಿ ಹಣ್ಣಿನ ಬುಟ್ಟಿಗಳು ಮುಟ್ಟಿಸಲ್ಪಡಬೇಕು. ಅಲ್ಲಿಂದ ಮುಂಬಯಿ, ಪುಣೆ, ಮುಂತಾದ ದೊಡ್ಡ ಬಾಜಾರ ಸ್ಥಳಗಳಿಗೆ ಆದಷ್ಟು ತೀವ್ರವಾಗಿ ಕಳಿಸಲ್ಪಡಬೇಕು. ಹಣ್ಣುಗಳೆಲ್ಲ ಸಾಮಾನ್ಯವಾಗಿ ದೀರ್ಘಕಾಲ ತಡೆಯುವದಿಲ್ಲ ಆದ್ದರಿಂದ ಅವನ್ನು ಬಾಜಾರಕ್ಕೆ ಕಳಿಸಿ ಮಾರುವಾಗ ಹೊತ್ತುಗಳೆಯುವದರಿಂದ ಬಹಳ ಹಾನಿಯಾಗುವದು. ಆದಷ್ಟು ಸಮೀಪದ ಪೇರಿಗೆ ಕಳಿಸಿ ಮಾರುವದು ಸಾಧ್ಯವಾದರೆ ಉತ್ತಮ. ಆದರೆ ಮುಂಬಯಿಯಂಥ ದೊಡ್ಡ ಊರುಗಳಲ್ಲಿ ಬೆಲೆಯು ಹೆಚ್ಚು ಬರಬಹುದು. ಅಲ್ಲಿಗೆ ಕಳಿಸುವದೂ ಅದೇ ಪ್ರಮಾಣದಲ್ಲ ಹೆಚ್ಚು ಖರ್ಚಿನದು. ಇದನ್ನೆಲ್ಲ ವಿಚಾರಮಾಡಿ, ತಮ್ಮ ಅನುಕೂಲತೆಗಳನ್ನು ನೋಡಿಕೊಂಡು ಹಣ್ಣುಗಳನ್ನು ಮಾರಲಿಕ್ಕೆ ಕಳಸಬೇಕು

**ಬಾಜಾರ :—**ಕರ್ನಾಟಕದಲ್ಲಿ ಬಹಳ ಹಣ್ಣು ಮಾರಾಟವಾಗ ಬಹುದಾದ ಬಾಜಾರವು ಇಲ್ಲವೆನ್ನಬಹುದು ಹುಬ್ಬಳ್ಳಿ, ಧಾರವಾಡ ಮುಂತಾದಲ್ಲಿ ಕೆಲವು ಹಣ್ಣುಗಳು ಮಾರಲ್ಪಡುತ್ತವೆ. ಆದರೆ ಅವು ಮುಂಬಯಿ ಪುಣೆ ಮುಂತಾದ ದೊಡ್ಡ ಬಾಜಾರಗಳಲ್ಲ. ನಮ್ಮಲ್ಲಿ ದೊಡ್ಡ ಪ್ರಮಾಣದಲ್ಲಿ ತೋಟಗಳು ಉಂಟಾದರೆ ಹಣ್ಣುಗಳನ್ನು ಮುಂಬಯಿಗೇ ಕಳಿಸಬೇಕಾಗ ಬಹುದು. ಯೋಗ್ಯರೀತಿಯಿಂದ ಹಣ್ಣುಗಳನ್ನು ಹದ ತುಂಬಿದರೆ ಮುಂಬಯಿಗೆ ರೈಲ್ವೆಯಿಂದ ಕಳಿಸುವದು ಅಸಾಧ್ಯವಲ್ಲ. ಸುಲಭ. ಮುಂಬಯಿಯಲ್ಲಿ ದಲಾಲರ ಹೆಸರಿಗೆ ಬುಟ್ಟಿಗಳನ್ನು ಕಳಿಸಬೇಕಾಗುವದು ಅವರು ಬಾಜಾರದರದಂತೆ ಅವುಗಳನ್ನು ಮಾರಿ ಹಣವನ್ನು ಕಳಿಸಿಕೊಡುತ್ತಾರೆ

ಮುಂಬಯಿಯ ದಲಾಲರು ಹಣ್ಣಿನ ಬುಟ್ಟಿಗಳಿಂದ ಆದಷ್ಟು ತಮ್ಮ ಲಾಭ ಮಾಡಿಕೊಳ್ಳುತ್ತಾರೆ ಮೇಲಿಂದ ನೋಡಲಿಕ್ಕೆ ಅವರು ಬುಟ್ಟಿಗೆ ನಾಲ್ಕಾಣೆಯಂತೆ ಕಮಿಶನ್ ತೆಗೆದುಕೊಳ್ಳುತ್ತಾರೆ ಹಮಾಲಿ, ಧರ್ಮಾದಾಯ, ಕಾ[illegible] ಭಾಡಿಗೆ, ಜಾಗದ ಭಾಡಿಗೆ, ಮುನಿಸಿಪಾಲಿಟಿ ಆಕ್‌ಟ್ರಾಯ ಟೋಲು, ಪೋಸ್ಟಿನ ಖರ್ಚು ಮುಂತಾದ ಅನೇಕ ತರದ ಖರ್ಚನ್ನು ಹಣ್ಣುಗಳಿಂದ ಬರುವ ದುಡ್ಡಿನಲ್ಲಿ ಮುರಿದುಕೊಳ್ಳುತ್ತಾರೆ. ಇದಲ್ಲದೆ ಹಣ್ಣಿನ ಬುಟ್ಟಿಗಳನ್ನು ಮಾರುವಾಗ ವಸ್ತ್ರದಲ್ಲಿ ಕೈ ಹಾಕಿ ಸನ್ನೆಯಿಂದ ಇಂತಿಷ್ಟು ರಕಮು ಎಂತ ತಿಳಿಸಿ ಗುಪ್ತವಾಗಿ ಮಾರುತ್ತಾರೆ ಈ ಪದ್ಧತಿಯಲ್ಲಿ ದಲಾಲರು ತಮಗೆ ಬೇಕಾದ ಮನುಷ್ಯನಿಗೆ ಮಾಲು ಮಾರಬಹುದು ಎಲ್ಲಕ್ಕೂ ಹೆಚ್ಚಿನ ಬೆಲೆಗೆ ಮಾರುತ್ತಾರೆಂಬ ನೇಮವಿಲ್ಲ ಮತ್ತು ಹಣ್ಣುಗಳನ್ನು ಕಳಿಸಿದ ಯಜಮಾನನಿಗೆ ಅಂದಾಜಿನ ಮೇಲೆ ಪಟ್ಟಿ ಬರೆದು ಕಳಿಸಿಬಿಡುತ್ತಾರೆ. ಹಣ್ಣುಗಳು ದಾರಿಯಲ್ಲಿ ಕೆಡುತ್ತವಾದ್ದರಿಂದ ದಲಾಲರ ಈ ತರದ ನಡೆತೆಗೆ ಅನುಕೂಲವಾಗುತ್ತದೆ ಹಣ್ಣುಗಳನ್ನು ಬೆಳೆಸುವವನಿಗೆ ಪೇರಿಯಲ್ಲಿ ಬರುವ ಬೆಲೆಯಲ್ಲಿ ನೂರಕ್ಕೆ ೧೦–೧೫ ರಂತೆ ಸಹ ಮುಟ್ಟುವದಿಲ್ಲ.

ಈ ಪದ್ಧತಿಯನ್ನು ಸುಧಾರಿಸಿ ತೋಟದ ಯಜಮಾನನಿಗೆ ಯೋಗ್ಯ ಬೆಲೆಯು ಮುಟ್ಟುವಂತೆ ಮಾಡುವದು ಅತ್ಯಂತ ಮಹತ್ವದ್ದು ಆದರೆ ಶ್ರೀಮಂತ ರಾದ ದಲಾಲರನ್ನು ವಿರೋಧಿಸಿ ಈ ಕೆಲಸ ಮಾಡುವದು ಬಹಳ ಕಠಿಣ. ಸರ ಕಾರದವರು ಈ ಕಡೆಗೆ ಲಕ್ಷ್ಯಗೊಟ್ಟು ಯೋಗ್ಯ ಕಾಯಿದೆಗಳನ್ನು ಮಾಡಿ, ದಲಾ ಲರ ಲೆಖ್ಖಪತ್ರಗಳನ್ನೂ ವ್ಯವಹಾರಗಳನ್ನೂ ಮೇಲ್ವಿಚಾರಣೆಗೊಳಪಡಿಸಿ ಅವಶ್ಯ ವಿದ್ದ ಅಮಲುದಾರರನ್ನು ನೇಮಿಸಿದ ಹೊರ್ತು ಈ ಸ್ಥಿತಿಯು ಸುಧಾರಿಸಲಾರದು.

**ನಂಬರವಾರಿ :—**ಹಣ್ಣುಗಳನ್ನು ಬುಟ್ಟಿಯಲ್ಲಿ ತುಂಬುವಾಗ ಬುಡದಲ್ಲಿ ಸಣ್ಣ ಸಣ್ಣ ಹಣ್ಣುಗಳನ್ನು ಇಟ್ಟು ಅದರ ತಲೆಯ ಮೇಲೆ ದರ್ಶನೀ ಧರವನ್ನು ಮಾತ್ರ ದೊಡ್ಡ ಉತ್ತಮ ಹಣ್ಣುಗಳನ್ನು ಇಟ್ಟು ತುಂಬುವದುಂಟು. ಈ ಪದ್ಧ ತಿಯು ಎಲ್ಲ ಸ್ಥಳಗಳಲ್ಲೂ ಇರುತ್ತದೆ. ಹಣ್ಣು ಕಳಿಸುವವನು ಪೇರೆಯಲ್ಲಿ ಗಿರಾಕಿ ಗಳು ಮೇಲಿನ ಹಣ್ಣುಗಳನ್ನು ನೋಡಿ ಮನಸೋತು ಇಡೀ ಬುಟ್ಟಿಯ ಹಣ್ಣುಗಳಿಗೆ ಮೇಲಿನ ಉತ್ತಮ ಹಣ್ಣುಗಳ ಮಾನದಿಂದ ಬೆಲೆ ಕೊಡುತ್ತಾರೆಂದು ತಿಳಿಯುತ್ತಾನೆ. ಆದರೆ ಈ ರೀತಿಯಿಂದ ಗಿರಾಕಿಗಳು ಮೋಸ ಹೋಗುವದಿಲ್ಲ. ಈ ಪದ್ಧತಿಯು ಸಾರ್ವತ್ರಿಕವಾಗಿರುವದರಿಂದ, ಕೊಳ್ಳುವ ಗಿರಾಕಿಗಳು ಮೊದಲು ಬುಟ್ಟಿಯ ಬುಡ ದಲ್ಲಿದ್ದ ಹಣ್ಣುಗಳನ್ನು ಸುರುವಿ ನೋಡುತ್ತಾರೆ ಮತ್ತು ಸಣ್ಣ ಹಣ್ಣುಗಳ ಮಾನ ದಿಂದ ಬುಟ್ಟಿಯ ಬೆಲೆ ಕಟ್ಟುತ್ತಾರೆ. ಇದರಿಂದ ಬೆಲೆಯು ಒಟ್ಟಿನ ಮೇಲೆ ಕಡಿಮೆ ಬಂದು, ಹಣ್ಣು ಕಳಿಸುವವನಿಗೇ ಹಾನಿಯಾಗುತ್ತದೆ. ಮತ್ತು ಮುಂಬಯಿಯ ದಲಾಲರಿಗೆ ಹಣ್ಣಿನ ದರವನ್ನು ತಮ್ಮ ಮನಸ್ಸಿಗೆ ಬಂದಂತೆ ಹಾಕಲಿಕ್ಕೆ ಹೆಚ್ಚಿಗೆ ಅನುಕೂಲವಾಗುತ್ತದೆ.

ಹೀಗೆ ಮಾಡದೆ ದೊಡ್ಡ, ಸಣ್ಣ, ಮಧ್ಯಮ ಹಣ್ಣುಗಳನ್ನೂ, ಪೇರೆಯ ಅಂದಾಜು ನೋಡಿ ಹೆಚ್ಚು ಕಡಿಮೆ ಬೆಲೆ ಬರಬಹುವಾದ ಹಣ್ಣುಗಳನ್ನೂ, ಬೇರೆ ಬೇರೆಯಾಗಿ ವಿಂಗಡಿಸಿ ಬೇರೆ ಬೇರೆ ಬುಟ್ಟಿಗಳಲ್ಲಿ ತುಂಬಿ, ನಂಬರು ಹಾಕಿ, ಪೇರೆಗೆ ಕಳಿಸುವದು ಲಾಭಕರವೆಂದು ಮಾವಿನ ಹಣ್ಣುಗಳ ಮೇಲಾದ ನಂಬರು ಹಾಕುವ ಪ್ರಯೋಗಗಳಿಂದ ಕಂಡು ಬರುತ್ತದೆ. ಯಾವದೇ ಒಂದು ನಂಬರದ ಬುಟ್ಟಿಯಲ್ಲಿ ಇದ್ದ ಎಲ್ಲ ಹಣ್ಣುಗಳೂ ಒಂದೇ ನಮೂನೆಯವಿರಬೇಕು. ಹೆಸರಿಗೆ ತಕ್ಕಂತೆ ಒಳ ಗಿನ ಎಲ್ಲ ಹಣ್ಣುಗಳೂ ಇರಬೇಕು. ಇದಲ್ಲದೆ, ಹಣ್ಣುಗಳನ್ನು ತುಂಬುವಾಗ ಬುಟ್ಟಿಗಳಲ್ಲಿ ತುಂಬದೆ ಪೆಟ್ಟಿಗೆಗಳಲ್ಲಿ ತುಂಬಿದರೆ ಗಾಡಿಯಲ್ಲಿ ಹೇರುವಾಗಲೂ, ಇಳಿ ಸುವಾಗಲೂ, ಬಂದರಗಳ ಮೇಲೂ, ಪೇರೆಯಲ್ಲೂ, ಹಣ್ಣುಗಳಿಗೆ ಪೆಟ್ಟಾಗಿ ಹಾನಿ ಯಾಗುವದು ಕಡಿಮೆಯಾಗುತ್ತದೆ. ಆಗಗಾಡಿಗಳಲ್ಲಿ ಬುಟ್ಟಿಗಳನ್ನು ಒಂದರಮೇ ಲೊಂದು ಹೇರುವದರಿಂದ ಕೆಳಗಿನ ಬುಟ್ಟಿಗಳಲ್ಲಿದ್ದ ಹಣ್ಣುಗಳ ಮೇಲೆ ಭಾರ ಬಿದ್ದು

ಅವು ಕೆಡುತ್ತವೆ. ಹಣ್ಣುಗಳು ಕಳವಾಗುತ್ತವೆ. ಇವೆಲ್ಲ ಆಗದಂತೆ ವ್ಯವಸ್ಥೆ ಯಾಗಬೇಕು. ಆಗಗಾಡಿಯ ದರವೂ ಇಳಿಯಬೇಕು. ಇವಿಷ್ಟೆಲ್ಲ ಸಾಧಿಸಿಕೊಳ್ಳಲು ತೋಟಿಗರ ಸಂಘಗಳುಂಟಾಗಿ, ಸರಕಾರದವರ ಮೇಲೂ, ಆಗಗಾಡಿ ಕಂಪನಿಗಳ ಮೇಲೂ ಅವುಗಳ ಜೋರು ಬೀಳುವದು ಅತ್ಯವಶ್ಯವು.

**ಕಾದಿಡೋಣ :—** ಹಣ್ಣುಗಳು ಯೋಗ್ಯ ದರದಿಂದ ಮಾರಾಟವಾಗದೆ ಇದ್ದಾಗ, ಮತ್ತು ಅನೇಕ ತೋಟಗಳಿಂದ ಒಂಗೇ ಕಾಲದಲ್ಲಿ ಹಣ್ಣುಗಳು ಪೇಠೆಗೆ ಬಂದು ಬೆಲೆಯು ಕಡಿಮೆಯಾದಾಗ, ಅವುಗಳನ್ನು ತರತರದ ಪಾಕಗಳನ್ನು ಮಾಡಿ ಇಲ್ಲವೆ ಅವುಗಳ ರಸವನ್ನು ತೆಗೆದು ಬಾಟ್ಲಿಗಳಲ್ಲಿ ಆಗಲಿ, ದಬ್ಬಿಗಳಲ್ಲಿ ಆಗಲಿ ತುಂಬಿ ಮುಂಗ ಉಪಯೋಗವಾಗುವಂತೆ ಕಾದಿಡಬಹುದು. ಈ ರೀತಿಯ ಉದ್ಯೋಗವು ಅಮೇರಿಕ, ಇಂಗ್ಲಂಡ ಮುಂತಾದ ದೇಶಗಳಲ್ಲಿ ಬಹು ದೊಡ್ಡ ಪ್ರಮಾಣದಲ್ಲಿ ನಡೆದಿರುತ್ತದೆ. ಅಲ್ಲಿ ತುಂಬಿ ಕಳಿಸಿದ ಹಣ್ಣುಗಳೂ ಹಣ್ಣುಗಳಿಂದಾದ ಪದಾರ್ಥಗಳೂ ನಮ್ಮಲ್ಲಿಯ ಪೇಠೆಗಳಲ್ಲೂ ಮಾರಲಿಕ್ಕೆ ಸಿಗುತ್ತವೆ. ಅವು ವರ್ಷಗಟ್ಲೆ ಕೆಡುವದಿಲ್ಲ. ಮಾವಿನ ಹಣ್ಣಿನ ರಸವನ್ನು ತೆಗೆದು ಡಬ್ಬಿಗಳಲ್ಲಿ ತುಂಬಿಡುವದೂ, ಪೇರಲ ಹಣ್ಣಿನ ಜೇಲಿ ಮುರಬ್ಬಗಳನ್ನು ಮಾಡಿ ಮಾರುವದೂ, ನೇರಲ, ದಾಳಿಂಬ, ನಿಂಬೆ ಮುಂತಾದವುಗಳ ರಸವನ್ನು ಬಾಟ್ಲಿಗಳಲ್ಲಿ ತುಂಬಿ ಮಾರುವದೂ ನಮ್ಮ ದೇಶದಲ್ಲಿ ಅಲ್ಪ ಸ್ವಲ್ಪ ನಡೆದಿರುತ್ತದೆ. ಅದು ಇನ್ನೂ ಬಹು ದೊಡ್ಡ ಪ್ರಮಾಣದಲ್ಲಿ ನಡೆಯುವದು ಅವಶ್ಯವು. ಇದರಿಂದ ತೋಟಿಗನ ಹಣ್ಣುಗಳಿಗೆ ಯೋಗ್ಯ ಬೆಲೆಯು ಬಂದು ದೇಶದ ಕಲ್ಯಾಣವಾಗುವದೆಂಬದರಲ್ಲಿ ಸಂಶಯವಿಲ್ಲ

ಹಣ್ಣಿನ ತೋಟಗಳ ವಿಷಯವು ಸಾಮಾನ್ಯವಾಗಿ ಸ್ವಲ್ಪದರಲ್ಲಿ ಹೇಳಲ್ಪಟ್ಟಿತು. ಹಣ್ಣಿನ ತೋಟಗಳು ಬೆಳೆದು ಊರ್ಜಿತ ಸ್ಥಿತಿಗೆ ಮುಟ್ಟಲು ಎಷ್ಟು ಸಂಗತಿಗಳು ವಿಚಾರಿಸಲ್ಪಡಬೇಕೆಂಬದು ಇದರಿಂದ ತಿಳಿದೀತು. ಇನ್ನು ಹಣ್ಣಿನ ಗಿಡಗಳ ಅಭಿವೃದ್ಧಿಯ ರೀತಿಗಳನ್ನೂ, ಸಾಗುವಳಿಯ ಪದ್ಧತಿಗಳನ್ನೂ ಮುಂದಿನ ಪ್ರಕರಣಗಳಲ್ಲಿ ವಿವರಿಸುವೆವು.



# ಪ್ರಕರಣ ೩

## ಹಣ್ಣಿನ ಗಿಡಗಳ ಅಭಿವೃದ್ಧಿಯು

"ಜೀವಿ ಮಾತ್ರದ ಆಯುಷ್ಯಕ್ಕೆ ಮರ್ಯಾದೆ ಇರವದರಿಂದ ಅದರ ಆಯುಷ್ಯವು ತೀರುವದರ ಮೊದಲು ಸಂತತಿಯ ರೂಪದಿಂದ ತನ್ನ ಅಂಶವನ್ನು ತನ್ನ ಅನಂತರದಲ್ಲಿ ಇಟ್ಟು ಅದು ತನ್ನ ವಂಶವೃದ್ಧಿಯನ್ನು ಮಾಡಿಕೊಳ್ಳಬೇಕಾಗುತ್ತದೆ. ವನಸ್ಪತಿಗಳಲ್ಲಿ ವಂಶವೃದ್ಧಿಯು ಮುಖ್ಯವಾಗಿ ಬೀಜದಿಂದ ಆಗುತ್ತದಾದರೂ, ಮನುಷ್ಯನು ಬೇರೆ ಬೇರೆ ಕೃತಿಗಳಿಂದ ತನಗೆ ಬೇಕಾದ ಸುಧಾರಣೆಯನ್ನು ಘಟಿಸಿರುವನು. ಈ ಸುಧಾರಣೆಯು ನಿರಂತರವಾಗಿ ಸಾಗಲಿಕ್ಕೆ ನೈಸರ್ಗಿಕ ರೀತಿಯಿಂದ ಹುಟ್ಟುವ ವನಸ್ಪತಿಗಳ ಬೀಜಗಳನ್ನೇ ಅವಲಂಬಿಸಿದರೆ ಬರುವಂತಿಲ್ಲ. ಬೀಜವು ಹೆಣ್ಣು ಗಂಡುಗಳ ಸಂಯೋಗದಿಂದ ಆಗುತ್ತದೆ. ಹೆಣ್ಣು ಗಂಡುಗಳೆರಡೂ ಒಂದೇ ಜಾತಿಯವಿದ್ದರೂ, ಅವು ಒಂದೇ ವನಸ್ಪತಿಯ ಮೇಲಿನ ಒಂದೇ ಹೂವಿನವಾಗಲಿ, ಒಂದೇ ವನಸ್ಪತಿಯ ಮೇಲಿನ ಬೇರೆ ಬೇರೆ ಹೂವಿನವಾಗಲಿ, ಅಥವಾ ಅವೆರಡೂ ಒಂದೇ ಜಾತಿಯ ಬೇರೆ ಬೇರೆ ಮರಗಳ ಹೂವಿನವಾಗಲಿ ಇರಬಹುದು. ಮೊದಲನೇ ತರದವುಗಳ ಸಂಯೋಗವು ಕ್ವಚಿತ್ತಾಗಿ ಆಗುವದು. ಎರಡನೇ ಮತ್ತು ಮೂರನೇ ತರದವುಗಳ ಸಂಯೋಗವು ವಿಶೇಷವಾಗಿ ದೃಷ್ಟಿಗೆ ಬೀಳುವದು. ಮತ್ತು ಮೂರ್ತಿಗಳಿದ್ದಷ್ಟೇ ಪ್ರಕೃತಿಗಳಿರುತ್ತವೆಂಬ ನ್ಯಾಯದಂತೆ ಪ್ರತಿಯೊಂದು ವನಸ್ಪತಿಯಲ್ಲೂ ಒಂದಿಲ್ಲೊಂದು ವಿಶೇಷವಿದ್ದೇ ಇರುವದು. ಇಂಥ ವಿಶೇಷವು ಆನುವಂಶಿಕವಾಗಿಯಾಗಲಿ, ಆಗದೇ ಆಗಲಿ ಇರಬಹುದು ಆನುವಂಶಿಕವಾಗಿದ್ದರೆ ಅವುಗಳ ಸಂತತಿಯಲ್ಲಿ ಈ ವಿಶೇಷ ಗುಣವು ಕಂಡು ಬರುವದು ಇಲ್ಲವಾದರೆ ಕಂಡು ಬರಲಿಕ್ಕಿಲ್ಲ. ವನಸ್ಪತಿಗಳಲ್ಲಿದ್ದ ಯಾವದಾದರೊಂದು ವಿಶೇಷವು ಆನುವಂಶಿಕವಾಗಿರುವದೋ ಇಲ್ಲವೋ ಎಂಬದನ್ನು ಕಂಡು ಹಿಡಿಯಲು ಎಷ್ಟೋ ಸಾರೆ ಬಹಳ ಕಾಲವು ತಾಗುವದು. ಆದ್ದರಿಂದ ಈ ವಿಶೇಷವು ಇಷ್ಟವಾಗಿದ್ದರೆ ಇದನ್ನು ಶಾಶ್ವತವಾಗಿ ಮಾಡಲು ಗಂಡು ಹೆಣ್ಣುಗಳಿಂದುಂಟಾಗುವ ಸಂತತಿಯನ್ನು ಉಪಯೋಗಿಸದೆ, ಮನುಷ್ಯನು ಅಂಥ ವನಸ್ಪತಿಗಳ ಯಾವದಾದರೊಂದು ಭಾಗವನ್ನು ಉಪಯೋಗಿಸುತ್ತಾನೆ. ಮೊದಲನೇ ರೀತಿಯಿಂದ ನಿಜವಾದ ವಂಶವರ್ಧನವು ಆಗುತ್ತದೆ. ಎರಡನೇ ರೀತಿಯಿಂದ ಬರೇ ವ್ಯಕ್ತಿಯ ವೃದ್ಧಿಯೊಂದೇ ಆಗುತ್ತದೆ..............ಹೀಗೆ ಉಂಟಾಗುವ ವಂಶವರ್ಧನವೂ ವ್ಯಕ್ತಿವಿಸ್ತಾರವೂ ಅಭಿವೃದ್ಧಿಯೆಂಬ ಹೆಸರಿನಿಂದ ಕರೆಯಲ್ಪಡುವವು."

ಗಿಡಗಳ ಅಭಿವೃದ್ಧಿಯು ಎರಡು ವಿಧವೆಂಬದು ಇದರಿಂದ ವ್ಯಕ್ತವಾಯಿತು. ಒಂದು ಬೀಜಗಳಿಂದ, ಇನ್ನೊಂದು ಗಿಡಗಳ ಭಾಗಗಳಿಂದ. ಬೀಜಗಳಿಂದಾಗುವ

ಅಭಿವೃದ್ಧಿಯು ಸಕಲ ಪ್ರಾಣಿಮಾತ್ರಗಳಿಗೆಲ್ಲ ಅನ್ವಯಿಸುವದು. ಭಾಗಗಳಿಂದ ಆಗುವ ಅಭಿವೃದ್ಧಿಯು ವನಸ್ಪತಿಗಳಿಗಷ್ಟೇ ಹೆಚ್ಚಿನದು. ವನಸ್ಪತಿಗಳಲ್ಲಿ ಕಳೆದು ಹೋದ ತಮ್ಮ ಭಾಗವನ್ನು ಉಂಟು ಮಾಡಿಕೊಳ್ಳುವ ಶಕ್ತಿಯಿರುತ್ತದೆ. ಗಿಡಗಳ ಎಲೆಗಳನ್ನೆಲ್ಲ ಸವರಿದರೆ, ಟೊಂಗೆ ಬೇರುಗಳನ್ನು ಕಡಿದರೆ, ಹೊಸ ಎಲೆಗಳನ್ನೂ ಟೊಂಗೆ ಬೇರುಗಳನ್ನೂ ಹುಟ್ಟಿಸಿಕೊಳ್ಳುವ ಶಕ್ತಿಯು ಅವುಗಳಲ್ಲಿರುತ್ತದೆ. ಪ್ರಾಣಿಗಳಲ್ಲಿ ಹಾಗಿಲ್ಲ ಕಡಿದು ಹೋದ ಬೆರಳಿನ ಸ್ಥಳದಲ್ಲಿ ಇನ್ನೊಂದು ಬೆರಳು ಎಂದೂ ಮೂಡುವದಿಲ್ಲ. ಗಿಡಗಳಲ್ಲಿರುವ ಈ ವಿಶೇಷ ಗುಣದಿಂದ ಅವುಗಳನ್ನು ಅನೇಕ ಬೇರೆ ಬೇರೆ ರೀತಿಗಳಲ್ಲಿ ಅಭಿವೃದ್ಧಿಗೊಳಿಸುವದು ಶಕ್ಯವಾಗಿದೆ. ಎಲೆಗಳಿಂದಲೂ, ಟೊಂಗೆಗಳಿಂದಲೂ, ಬೇರುಗಳಿಂದಲೂ, ಮರಿಗಳಿಂದಲೂ ಹೊಸ ಗಿಡಗಳನ್ನು ಹುಟ್ಟಿಸಬಹುದು. ಗಿಡಗಳ ಮುಖ್ಯ ಭಾಗಗಳು ಎಲೆ, ಟೊಂಗೆ, ಬೇರುಗಳೆಂದು ಮೂರು. ಇವುಗಳಲ್ಲಿ ಯಾವ ಒಂದು ಭಾಗವನ್ನು ನಟ್ಟರೂ ಉಳಿದ ಎರಡು ಭಾಗಗಳು ಮೂಡಿ ಇಡೀ ಗಿಡವು ಉತ್ಪನ್ನವಾಗುವದು ಎಲ್ಲ ತರದ ಗಿಡಗಳಲ್ಲೂ ಇದು ಸಾಧ್ಯವಿಲ್ಲವೆಂಬುದು ನಿಜವು. ಅಂಥವು ಅಪವಾದಗಳೆನ್ನಬಹುದು.

ಹಣ್ಣಿನ ಗಿಡಗಳನ್ನು ಸಾಮಾನ್ಯವಾಗಿ ಬೀಜಗಳಿಂದಲೂ, ಟೊಂಗೆಗಳಿಂದಲೂ ಅಭಿವೃದ್ಧಿ ಮಾಡುತ್ತಾರೆನ್ನಬಹುದು. ಟೊಂಗೆಗಳನ್ನು ಉಪಯೋಗಿಸುವ ರೀತಿಗಳಲ್ಲಿ **ಕೊಂಬೆ, ಮರಿ, ಗೂಟಿ, ನಾಲಿಗೆ ಗೂಟಿ, ಕಣ್ಣು ಹಚ್ಚುವದು, ಕೊಡಿ ಕಟ್ಟುವದು** ಎಂಬವು ಮುಖ್ಯವಾದವುಗಳು. ಕಣ್ಣು ಹಚ್ಚುವದರಲ್ಲಿ ಮೂರು ಒಳಭೇದಗಳು. ಅವು ಯಾವವೆಂದರೆ, **ಢಾಲು ಕಣ್ಣು, ತುಂಡು ಕಣ್ಣು** ಮತ್ತು **ಉಂಗುರಗಣ್ಣು**. ಕೊಡಿ ಕಟ್ಟುವದರಲ್ಲಿ ಅನೇಕ ಒಳಭೇದಗಳಿರುತ್ತವೆ. ಅವುಗಳಲ್ಲಿ ಮುಖ್ಯವಾದವೆಂದರೆ, **ಭೆಟ್ಟಿ ಕೊಡಿ, ನಾಲಿಗೆ ಕೊಡಿ, ತಲೆ ಕೊಡಿ, ಬಗಲು ಕೊಡಿ, ಬೊಡ್ಡೆ ಕೊಡಿ,** ಮತ್ತು **ಬಾರು ಕೊಡಿ** ಎಂಬವು. ಮತ್ತು ಕಣ್ಣು ಹಚ್ಚುವದು, ಕೊಡಿ ಕಟ್ಟುವದು ಇವುಗಳನ್ನು ಕೊಂಬೆ, ಮರಿ, ಗೂಟಿ ಇವುಗಳಿಂದ ಬೇರ್ಪಡಿಸಬಹುದು. ಯಾಕಂದರೆ, ಕಣ್ಣು ಹಚ್ಚುವದರಲ್ಲೂ, ಕೊಡಿ ಕಟ್ಟುವದರಲ್ಲೂ ಎರಡು ಗಿಡಗಳ ಭಾಗಗಳನ್ನು ಒಂದಕ್ಕೊಂದು ಜೋಡಿಸಿ ಒಂದು ಹೊಸ ಗಿಡವನ್ನು ತಯಾರಿಸಬೇಕಾಗುತ್ತದೆ. ಕೊಂಬೆ, ಮರಿ, ಗೂಟಿ ಮುಂತಾದವುಗಳಲ್ಲಿ ಹಾಗಿಲ್ಲ. ಒಂದೇ ಗಿಡದ ಭಾಗದಿಂದ ಹೊಸ ಗಿಡ ಉಂಟಾಗುತ್ತದೆ. ಈ ಎಲ್ಲ ಪದ್ಧತಿಗಳನ್ನು ಸ್ವಲ್ಪದರಲ್ಲಿ ಕೋಷ್ಟಕ ರೂಪದಲ್ಲಿ ತೋರಿಸುವದು ಹ್ಯಾಗೆಂದರೆ :—

## ಹಣ್ಣಿನ ಗಿಡಗಳ ಅಭಿವೃದ್ಧಿ




ಈ ಎಲ್ಲ ವಿಧಗಳನ್ನು ಬೇರೆ ಬೇರೆಯಾಗಿ ವಿವರಿಸುವೆವು.

**ಬೀಜ :**—ಹಣ್ಣಿನ ಗಿಡಗಳ ಬೀಜಗಳನ್ನು ಸಣ್ಣ ಮಡಿಗಳಲ್ಲಿ, ಚೋರಿಗಳಲ್ಲಿ ಅಥವಾ ಪೆಟ್ಟಿಗೆಗಳಲ್ಲಿ ಬಿತ್ತಿ ಅಗೆಗಳನ್ನು ತಯಾರಿಸಿಕೊಳ್ಳುತ್ತಾರೆ. ಮುಂದೆ ಅಗೆಗಳು ದೊಡ್ಡವಾದ ಬಳಿಕ ತೋಟದಲ್ಲಿ ಯೋಗ್ಯ ಅಂತರದ ಮೇಲೆ ನೆಡುತ್ತಾರೆ. ಜಿರಾಯಿತ ಬೆಳೆಗಳ ಬೀಜಗಳಂತೆ ಮೊದಲೇ ಹೊಲದಲ್ಲಿ ಬಿತ್ತುವದಿಲ್ಲ. ಇದರ ಕಾರಣವೇನಂದರೆ ಹಣ್ಣಿನ ಗಿಡಗಳನ್ನು ಬಹಳ ಅಂತರದ ಮೇಲೆ ನೆಡಬೇಕಾಗುತ್ತದೆ. ಆದ್ದರಿಂದ ಅವು ಎಕರೆಯೊಂದಕ್ಕೆ ತುಸು ಗಿಡಗಳು ಬೇಕಾಗುತ್ತವೆ. ಪ್ರತಿಯೊಂದು ಗಿಡಕ್ಕೂ ಕುಣಿ ತೆಗೆದು ಗೊಬ್ಬರ ಹಾಕಬೇಕು ನೆರಳು ಮಾಡಬೇಕು ನೀರು ಕೊಡುವದೂ ಹಾಗೇ. ಗಿಡಗಳು ಸಣ್ಣವಿರುವಾಗ ಅವುಗಳ ಆರೈಕೆಯನ್ನು ಒತ್ತಟ್ಟಿಗೆ ಮಡಿಯಲ್ಲಿ ಮಾಡುವದು ಸುಲಭ. ವೆಚ್ಚವೂ ಶ್ರಮವೂ ಕಡಿಮೆ. ದೊಡ್ಡವಾದ ಬಳಿಕ ಅವು ಸಶಕ್ತವಾಗುವದರಿಂದ ತೋಟದ ಬಿಸಿಲು, ಮಳೆ, ಗಾಳಿಗಳನ್ನು ಸಹಿಸುತ್ತವೆ. ಮತ್ತು ಅವುಗಳ ಆರೈಕೆಯಲ್ಲಿ ತುಸು ಹೆಚ್ಚು ಕಡಿಮೆ ಆದರೂ ನಡೆಯುತ್ತದೆ.

**ಬೀಜವನ್ನು ಆರಿಸುವದು :—** ಸಂಪೂರ್ಣವಾಗಿ ಬೆಳೆದು ಮರದ ಮೇಲೇ ಹಣ್ಣಾದ ಹಣ್ಣುಗಳನ್ನು ಆರಿಸಿ, ಅವುಗಳಿಂದ ಬೀಜಗಳನ್ನು ತೆಗೆಯ ಬೇಕು ಮತ್ತು ಒಂದು ಪಾತ್ರೆಯಲ್ಲಿ ನೀರು ತುಂಬಿ ಅದರಲ್ಲಿ ಚೆಲ್ಲಬೇಕು ನೀರಿನ ಮೇಲೆ ತೇಲುವ ಬೀಜಗಳು ಒಳ್ಳೆಯವಲ್ಲ ಮುಳುಗುವ ಬೀಜಗಳು ಜೀವವೂ ಭಾರವಾದವೂ ಇರುತ್ತವೆ ಇಂಥ ಬೀಜಗಳನ್ನೇ ಬಿತ್ತಲಿಕ್ಕೆ ಉಪಯೋಗಿಸಬೇಕು ಎಲ್ಲ ಕಾಲಿನಿಗಳ ಬೀಜಗಳು ಬಲಿತಿರುವದಿಲ್ಲ ಅವು ಹುಟ್ಟುವದಿಲ್ಲ ಹುಟ್ಟಿದರೂ ಅಶಕ್ತ ಗಿಡಗಳನ್ನು ಕೊಡುತ್ತವೆ

**ಬೀಜವನ್ನು ಎಷ್ಟು ದಿನ ಇಡಬಹುದು ? :—** ಹಣ್ಣಿನ ಬೀಜಗಳು ಬಹಳ ದಿನ ಇಟ್ಟರೆ ಹುಟ್ಟುವದಿಲ್ಲ ಅವುಗಳಲ್ಲಿರುವ ವೃಕ್ಷೋತ್ಪಾದನ ಶಕ್ತಿಯು ಸಾಮಾನ್ಯವಾಗಿ ಕೆಲವು ದಿನಗಳಲ್ಲೇ ಇಲ್ಲದಾಗುತ್ತದೆ. ಆದ್ದರಿಂದ ಅವನ್ನು ಆದಷ್ಟು ಬೇಗನೆ ಬಿತ್ತಿ ಅಗೆಗಳನ್ನು ತಯಾರಿಸಿಕೊಳ್ಳಬೇಕು ಯಾವ ಯಾವ ಹಣ್ಣಿನ ಬೀಜಗಳು ಎಷ್ಟೆಷ್ಟು ದಿನಗಳ ವರೆಗೆ ಕೆಡುವದಿಲ್ಲ ಎಂಬದನ್ನು ನೋಡುವಾ.

| | ಹೆಸರು. | | ಅವಧಿ. |
|---|---|---|---|
| ೧. | ಮಾವು | ... | ೨ ತಿಂಗಳು |
| ೨. | ಕಿತ್ತಳೆ ವರ್ಗ | | ೩ ತಿಂಗಳು |
| ೩ | ನಿಂಬೆಕಾಯಿ | ... | ೩ ತಿಂಗಳು |
| ೪. | ಚಿಕ್ಕೂ | .. | ೧ ವರ್ಷ |
| ೫. | ಪಪ್ಪಾಯಿ | .. | ೧ ವರ್ಷ |
| ೬ | ಪೇರಲ | . | ೧ ವರ್ಷ |
| ೭ | ದಾಳಿಂಬ | . | ೧ ವರ್ಷ |
| ೮ | ಗೋವೆ ಹಣ್ಣು | . | ೧ ವರ್ಷ |
| ೯ | ಬೋರೆ | . | ೧ ವರ್ಷ |
| ೧೦. | ನೇರಲ | ... | ೧ ತಿಂಗಳು |
| ೧೧ | ಹಲಸು | ... | ೧ ತಿಂಗಳು |

ಬೀಜಗಳನ್ನು ಆಗಿಂದಾಗ ಬಿತ್ತುವದಾಗದಿದ್ದರೆ, ಅವು ಕಪದುತೆ ಬೂದಿಯಲ್ಲಿ ಕಲಿಸಿ, ಡಬ್ಬಿಯಲ್ಲಿ ತುಂಬಿ ಒಣ್ಣೇ ಸ್ಥಳದಲ್ಲಿ ಕಾಯಿದಬೇಕು ಹಳೆಯದಾದಂತೆ ಅವು ಹುಟ್ಟುವದು ಕಡಿಮೆ.

**ಬೀಜವು ಹುಟ್ಟಲಿಕ್ಕೆ ಏನೇನು ಬೇಕು ? :—** ಬೀಜಗಳು ಅಂಕುರಿಸಲಿಕ್ಕೆ ನೀರು, ಹವೆ, ಮತ್ತು ಉಷ್ಣತೆಗಳು ಬೇಕಾಗುತ್ತವೆ. ನೀರಿನಿಂದ ಬೀಜವು

ಉಬ್ಬಿ ಅದರೊಳಗಿನ ಅಂಕುರಕ್ಕೆ ಚೈತನ್ಯವುಂಟಾಗುತ್ತದೆ. ಅದು ಬೀಜದಲ್ಲಿ ಇದ್ದ ಆಹಾರವನ್ನು ಉಪಯೋಗಿಸಿಕೊಂಡು ಬೆಳೆಯುತ್ತದೆ. ಈ ಕಾರ್ಯಕ್ಕೆ ಹವೆಯಲ್ಲಿರುವ ಆಕ್ಸಿಜನ ಅಥವಾ ಪ್ರಾಣವಾಯುವು ಬೇಕು ಪ್ರಾಣವಾಯುವು ಇಲ್ಲವಾದರೆ ಬೀಜವು ಅಂಕುರಿಸುವಾಗ ಆಗಬೇಕಾದ ರಾಸಾಯನಿಕ ಕ್ರಿಯೆಗಳು ಆಗಲಾರವು. ಬೀಜವು ಕೊಳೆತು ಹೋಗುವದು. ಮತ್ತು ಉಷ್ಣತೆಯಿಲ್ಲದೆ ಇದ್ದರೆ ಈ ಕ್ರಿಯೆಗಳು ಆಗಬೇಕಾದಷ್ಟು ತೀವ್ರವಾಗಿ ಆಗುವದಿಲ್ಲ. ಉಷ್ಣತೆಯು ಮಾನವು ತೀರ ಕಡಿಮೆ ಇದ್ದರೆ ಅವು ನಡೆಯುವದೇ ಇಲ್ಲ.

ಆದ್ದರಿಂದ ಬೀಜವನ್ನು ಬಿತ್ತುವಾಗ ಮಡಿಯಲ್ಲಾ, ಚೋರಿಯಲ್ಲಾ, ಪೆಟ್ಟಿಗೆಯಲ್ಲಾ ಈ ಮೂರೂ ಸಂಗತಿಗಳು ಬೇಕಾದ ಪ್ರಮಾಣದಲ್ಲಿರುವಂತೆ ನೋಡಿಕೊಳ್ಳಬೇಕು. ಮಣ್ಣು ನೀರಿನಿಂದ ಒದ್ದೆಯಾಗಿರಬೇಕು. ಅದರಲ್ಲಿ ನೀರು ನೆಲಸಿರಬಾರದು. ನೀರು ನೆಲಸಿದರೆ ಹವೆಯಾಡುವದು ನಿಂತು ಹೋಗಿ ಬೀಜವು ಕೊಳೆಯುವದು ಮಣ್ಣು ಸೈಲಾಗಿರಬೇಕು ಇಲ್ಲವಾದರೆ ಅದರಲ್ಲಿ ಹವೆಯಾಡುವದಿಲ್ಲ. ಮಣ್ಣಿನಲ್ಲಿ ಉಷ್ಣತೆಯಿರಬೇಕು. ಕರ್ನಾಟಕದಲ್ಲಿ ಸಾಕಷ್ಟು ಉಷ್ಣತೆಯು ಯಾವಾಗಲೂ ಇದ್ದೇ ಇರುತ್ತದೆ. ಅದಕ್ಕಾಗಿ ನಾವೇನೂ ಮಾಡ ಬೇಕಾಗುವದಿಲ್ಲ.

**ಬೀಜವನ್ನು ಯಾವಾಗ ಬಿತ್ತಬೇಕು? :—** ಹಣ್ಣಿನ ಗಿಡಗಳ ಬೀಜ ಗಳನ್ನು ಮಡಿಗಳಲ್ಲಿ ಬಿತ್ತಿ ಕಯ್ಯಿಂದ ನೀರು ಹಾಕಿ ಬೆಳೆಸಬೇಕಾದ್ದರಿಂದ, ಅವನ್ನು ಅನುಕೂಲತಾನುಸಾರವಾಗಿ ಯಾವಾಗ ಬಿತ್ತಿದರೂ ಬರುತ್ತದೆ ಚಳಿಗಾಲದಲ್ಲಿ ಬೀಜವು ಹುಟ್ಟಲು ತುಸು ತಡವಾಗುತ್ತದೆ ಬೇಸಿಗೆಯಲ್ಲಿ ಅದು ಬೇಗನೆ ಹುಟ್ಟುತ್ತದೆ ಮಳಗಾಲದ ಆರಂಭದಲ್ಲಿ ಬಿತ್ತಿದರೆ ನೀರು ಹಾಕುವ ಕಾರಣವಿಲ್ಲ. ಅಗೆಗಳನ್ನು ತಯಾರಿಸುವದು ಸುಲಭ.

**ಬೀಜವನ್ನು ಹ್ಯಾಗೆ ಬಿತ್ತಬೇಕು?:—** ಸ್ವಾಭಾವಿಕವಾಗಿ ಮರದಿಂದ ಬಿದ್ದ ಬೀಜವು ಅಡ್ಡವಾಗಿ ನೆಲದ ಮೇಲೆ ಬಿದ್ದಿರುತ್ತದೆ ಅದರ ಕಣ್ಣು ಮೇಲ್ಮು ಖವಾಗಿಯೂ ಇರುವದಿಲ್ಲ. ಕೆಳಮುಖವಾಗಿಯೂ ಇರುವದಿಲ್ಲ. ಅದಕ್ಕೆ ಅನು ಕೂಲ ಪರಿಸ್ಥಿತಿಯು ಒದಗಿದ ಕೂಡಲೆ ಅದು ಹುಟ್ಟುತ್ತದೆ. ನಾವಾದರೂ ಇದನ್ನೇ ಅನುಕರಿಸುವದು ಉತ್ತಮ. ಯಾಕಂದರೆ ಬೀಜವನ್ನು ಮೇಲ್ಮುಖ ಮಾಡಿ ಬಿತ್ತಿದರೆ, ಅಂಕುರದ ಬೇರಿನ ಭಾಗವು ಕಣ್ಣಿನಿಂದ ಹೊರಬಿದ್ದು, ಬಗ್ಗಿ, ಕೆಳಮುಖವಾಗಿ ಬೆಳೆಯಬೇಕಾಗುತ್ತದೆ. ಅದರಂತೆ ಕೆಳಮುಖವಾಗಿ ಬಿತ್ತಿದರೆ ಅಂಕುರದ ಟೊಂಗೆಯ ಬಾಗವು ಹೊರಬಿದ್ದು ತಿರುಗಿ ಬಗ್ಗಿ ಮೇಲ್ಮುಖವಾಗಿ

ಬೆಳೆಯಬೇಕಾಗುತ್ತದೆ. ಇವೆರಡೂ ಸ್ಥಿತಿಗಳಲ್ಲಿ ಅಂಕುರದ ಶಕ್ತಿಯು ಕೆಲಮಟ್ಟಿಗಾದರೂ ವ್ಯರ್ಥವಾಗಿ ಉಪಯೋಗಿಸಲ್ಪಡುತ್ತದೆ. ಅಡ್ಡವಾಗಿ ಬಿತ್ತಿದರೆ ಹೀಗೆ ಆಗುವದಿಲ್ಲ.

**ಎಷ್ಟು ಆಳವಾಗಿ ಬಿತ್ತಬೇಕು ? :—** ಬೀಜವನ್ನು ಬಹಳ ಆಳವಾಗಿ ಬಿತ್ತಿದರೆ, ಅದು ಹುಟ್ಟುವದಿಲ್ಲ. ಹುಟ್ಟಿದರೂ ಮಣ್ಣಿನ ಮೇಲೆ ಬರುವದರೊಳಗೆ ಅದರ ಅಂಕುರವು ಮುರಿದು ಹೋಗುತ್ತದೆ. ಇಲ್ಲವೆ ಕೊಳೆಯುತ್ತದೆ. ತೀರ ಮಣ್ಣಿನ ಮೇಲೆ ಬಿತ್ತಿದರೂ ಅದಕ್ಕೆ ನೀರು, ಉಷ್ಣತೆಗಳು ಸರಿಯಾಗಿ ದೊರೆಯುವದಿಲ್ಲ. ಅದು ಗಾಳಿಯಿಂದ ಹಾರಿ ಹೋಗಬಹುದು. ಮಳೆಯಿಂದ ತೊಳೆದು ಹೋಗಬಹುದು. ಹಕ್ಕಿ ಪಕ್ಷಿಗಳು ಅದನ್ನು ತಿನ್ನಬಹುದು. ಇರುವೆಗಳು ಹೊರಬಹುದು. ಆದ್ದರಿಂದ ಬೀಜವನ್ನು ಸುಮಾರು ಅರ್ಧ ಇಂಚಿನಿಂದ ಒಂದು ಇಂಚು ಆಳವಾಗಿ ಬಿತ್ತಬೇಕು.

ಮತ್ತು ಬಿತ್ತುವಾಗ ಮಡಿಯಲ್ಲಿ ಸಾಲಿನಲ್ಲಿ ಯೋಗ್ಯ ಅಂತರದ ಮೇಲೆ ಬಿತ್ತಬೇಕು. ಇದರಿಂದ ಮಣ್ಣು ಕದರುವದೂ, ಹುಲ್ಲು ಕಳೆಗಳನ್ನು ತೆಗೆಯುವದೂ, ಹೆಚ್ಚಾದ ಅಗೆಗಳನ್ನು ಕಿತ್ತುಬಿಡುವದೂ ಸುಲಭವಾಗುತ್ತದೆ. ಅಗೆಗಳು ಜೋರಿನಿಂದ ಬೆಳೆಯುತ್ತವೆ.

**ಮಡಿಗಳು :—** ಮಡಿಗಳನ್ನು ತುಸು ಎತ್ತರವಾದ ಮತ್ತು ಬೈಲಾದ ಸ್ಥಳದಲ್ಲಿ ಮಾಡಬೇಕು. ಅವು ಮೂರು ಫೂಟು ಅಗಲಾಗಿರಬೇಕು. ಹೆಚ್ಚು ಅಗಲಾದರೆ ಅವನ್ನು ತುಳಿಯದೆ ಹೊರಗೆ ಕುಳಿತು ಮಣ್ಣು ಕೆದರುವದೂ, ನೀರು ಹಾಕುವದೂ ಆಗುವದಿಲ್ಲ ಉದ್ದದಲ್ಲಿ ಎಷ್ಟಿದ್ದರೂ ಅಡ್ಡಿಯಿಲ್ಲ. ಮಡಿಯನ್ನು ಮಾಡಲಿಕ್ಕಿರುವ ನೆಲವನ್ನು ಆರೆಂಟು ಇಂಚು ಆಳವಾಗಿ ಅಗೆದು ಹೆಂಟೆಗಳನ್ನೆಲ್ಲ ಒಡೆದು ಹಸನ ಮಾಡಬೇಕು. ಬಳಿಕ ಒಂದು ಫೂಟು ಉದ್ದಕ್ಕೆ ಒಂದು ಸಣ್ಣ ಬುಟ್ಟಿ ತುಂಬ ರೇವೆ ಒಂದು ಬುಟ್ಟಿ ಚನ್ನಾಗಿ ಕೊಳೆತ ಗೊಬ್ಬರ ಈ ಪ್ರಮಾಣದಲ್ಲಿ ಹಾಕಿ, ಇವೆರಡನ್ನೂ ಮಣ್ಣಿನಲ್ಲಿ ಒಂದಾಗುವಂತೆ ಕೂಡಿಸಬೇಕು. ಬಳಿಕ ಮಡಿಯನ್ನು ಸರಿಯಾಗಿ ಪಸರಿಸಿ ಸಪಾಟ ಮಾಡಿದರೆ, ಸುತ್ತಲಿನ ನೆಲಕ್ಕಿಂತ ಅದು ಆರು ಇಂಚು ಎತ್ತರವಾಗುವದು. ಹೀಗೆ ತಯಾರಾದ ಮಡಿಯಲ್ಲಿ ಆರಾರು ಇಂಚಿಗೊಂದರಂತೆ ಅಡ್ಡ ಗೆರೆಗಳನ್ನು ತೆಗೆದು, ಬೀಜಗಳನ್ನು ಸರಿಯಾಗಿ ಅವುಗಳಲ್ಲಿ ಚೆಲ್ಲಬೇಕು. ಮತ್ತು ಅವುಗಳ ಮೇಲೆ ತುಸು ಮಣ್ಣು ಮುಚ್ಚಿ ಒತ್ತಬೇಕು. ಆ ಮೇಲೆ ನೀರಿನ ತುಂತುರು ಬೀಳುವ ಜಾಳಿಗೆಯುಳ್ಳ ಝಾರಿಯಿಂದ ಮಡಿಯು ಕೆಳತನಕ ಒದ್ದೆಯಾಗುವಷ್ಟು ನೀರು ಹಾಕಬೇಕು. ಬಿಸಿಲಿನ ತಾಪವು ಹೆಚ್ಚಾ

ದರೆ ದಿನಕ್ಕೆ ಎರಡು ಮೂರು ಸಾರೆ ನೀರು ಹಾಕಬೇಕಾಗುವದು. ಮಳೆಗಾಲದ ಆರಂಭದಲ್ಲಿ ಜಡಿ ಮಳೆಯು ಹೊಡತಕ್ಕೆ ಬೀಜಗಳು ಹರಿದು ಹೋಗಬಾರದೆಂದು ಅವು ಹುಟ್ಟಿ ಮೇಲೆ ಬರುವ ವರೆಗೆ ಮಡಿಗಳ ಮೇಲೆ ಗೋಣಿ ಚೀಲದ ತುಂಡು ಗಳನ್ನು ಪಸರಿಸಿ ಮುಚ್ಚುವದುಂಟು

ಸಾಧಾರಣವಾಗಿ ಹಣ್ಣಿನ ಬೀಜಗಳು ಹುಟ್ಟುವದಕ್ಕೆ ೧೫—೨೦ ದಿನಗಳು ಬೇಕು. ಹುಟ್ಟಿದ ಬಳಿಕ ಬಿಸಿಲಿನ ತಾಪವು ಪ್ರಖರವಾದರೆ ಎಳೆ ಅಗೆಗಳು ಸುಟ್ಟು ಹೋಗಬಾರದೆಂದು ಅವುಗಳ ಮೇಲೆ ಯಾತರಿಂದಾದರೂ ನೆರಳು ಮಾಡಬೇಕು. ತುಸು ದಿನಗಳ ತರುವಾಯ ನೆರಳು ಬೇಕಾಗುವದಿಲ್ಲ ಅಗೆಗಳ ಸಾಲುಗಳ ನಡುವೆ ಆಗಾಗ್ಗೆ ಮಣ್ಣು ಕೆದರಿ, ತುಸು ಸೆಗಣೀ ನೀರನ್ನಾಗಲಿ, ಗೋಮೂತ್ರವನ್ನಾಗಲಿ, ಸಲ್ಫೇಟ ಆಫ ಎಮೋನಿಯಾ ನೀರನ್ನು ಆಗಲಿ ಸಾಲಿಗೊಂದು ಪೋಲಿಸುತ್ತ ಹಾಕಿ ದರೆ ಅಗೆಗಳಿಗೆ ಹುರುಪು ಬಂದು ಬೇಗ ಬೆಳೆಯುತ್ತವೆ ಐದಾರು ತಿಂಗಳುಗಳಾದ ಬಳಿಕ, ಅಗೆಗಳನ್ನು ಮಡಿಗಳಿಂದ ಕಿತ್ತು ಒಂದೊಂದು ಫೂಟು ಅಂತರದ ಮೇಲೆ ಬೇರೊಂದೆಡೆಗೆ ನೆಡುತ್ತಾರೆ ಇದರಿಂದ ಅವು ಇನ್ನೂ ಬೆಳೆಯಲಿಕ್ಕೆ ಸ್ಥಳವು ದೊರೆಯುತ್ತದೆ. ಸಾಮಾನ್ಯವಾಗಿ ಮುಂದೆ ಆರು ತಿಂಗಳಲ್ಲಿ ಅಂದರೆ ಬಿತ್ತಿದ ಯಿಂದ ಒಂದು ವರ್ಷದಲ್ಲಿ ಅಗೆಗಳು ತೋಟದಲ್ಲಿ ನೆಡುವದಕ್ಕಾಗಲಿ, ಕಣ್ಣು ಹಚ್ಚುವದಕ್ಕಾಗಲಿ, ಕೂಡಿ ಕಟ್ಟುವದಕ್ಕಾಗಲಿ ತಯಾರಾಗುತ್ತವೆ.

**ಚೋರೆಗಳು :—** ಮಡಿಗಳನ್ನು ಮಾಡಲು ಅನುಕೂಲವಿಲ್ಲದಿದ್ದಾಗ, ಮಣ್ಣಿನ ಸಣ್ಣ ಚೋರೆಗಳನ್ನು ಬೀಜವನ್ನು ಬಿತ್ತುವದಕ್ಕೆ ಉಪಯೋಗಿಸುತ್ತಾರೆ ಈ ಚೋರೆಗಳಲ್ಲಿ ನೀರು ನಿಲಸಬಾರದೆಂದು, ಬುಡಕ್ಕೆ ಸುಮಾರು ಒಂದು ಇಂಚು ವ್ಯಾಸದ ತೂತು ಕೆದರಬೇಕು ಆ ತೂತಿನ ಮೇಲೆ ಒಡಕು ಪಾತ್ರೆಯ ತುಂಡು ಗಳನ್ನು ತಿರುವಿ ಹಾಕಿ, ಮೇಲಿಂದ ಇಟ್ಟಿಗೆಯ ಚಿಕ್ಕ ತಗಡುಗಳನ್ನಾಗಲಿ, ಕಲ್ಲನ್ನಾಗಲಿ, ಹಸಿ ಅಳಿವೆಯ ತುಂಡುಗಳನ್ನಾಗಲಿ ಒಂದೆರಡು ಇಂಚು ದಪ್ಪದ ಥರದಲ್ಲಿ ಹಾಕ ಬೇಕು ಇದರ ಮೇಲೆ ಮಣ್ಣು, ರೇವೆ, ಮತ್ತು ಗೊಬ್ಬರ ಇವನ್ನು ಸಮಪಾಲಿ ನಲ್ಲಿ ಕಲಿಸಿ, ಈ ಮಿಶ್ರಣವನ್ನು ತುಂಬಬೇಕು ಇದರಲ್ಲಿ ಬೀಜವನ್ನು ಬಿತ್ತಿ ನೀರು ಹಾಕಬೇಕು. ಉಳಿದ ಆರೈಕೆಯನ್ನು ಮಡಿಗಳಿಗೆ ಹೇಳಿದಂತೆ ಮಾಡ ಬೇಕು

**ಪೆಟ್ಟಿಗೆಗಳು :—** ಸಣ್ಣ ದೊಡ್ಡ ದೇವದಾರಿ ಪೆಟ್ಟಿಗೆಗಳನ್ನು ಚೋರೆಗ ಳಂತೆ ಉಪಯೋಗಿಸಬಹುದು. ಇವುಗಳ ಬುಡದಲ್ಲಿ ತೂತು ತೆಗೆಯುವದರ ಬದಲು, ಬುಡದ ಪಟ್ಟಿಗಳನ್ನು ನಡುವೆ ಅಂತರವಿಟ್ಟು ಹೊಡೆಯುವದು ಮೇಲು. ಉಳಿದದ್ದೆಲ್ಲ ಚೋರೆಗಳಲ್ಲಿಯಂತೆ.

ಚೌರಿಗೆಗಳಲ್ಲೂ, ಪೆಟ್ಟಿಗೆಗಳಲ್ಲೂ ಆಗಾಗ್ಗೆ ಮಣ್ಣು ತುಂಬ ಬೇಕಾಗುತ್ತದೆ. ಯಾಕಂದರೆ ದಿನಾಲು ನೀರು ಹಾಕುವದರಿಂದ ಅವುಗಳಲ್ಲಿರುವ ಮಣ್ಣು ನೀರಿನ ಕೂಡ ತುಸು ತುಸು ಹರಿದು ಹೋಗಿ ಅಗೆಗಳ ಬೇರು ಮೇಲೆ ಕಾಣಹತ್ತುತ್ತದೆ. ಇದರಿಂದ ಅಗೆಗಳು ಚನ್ನಾಗಿ ಬೆಳೆಯುವದಿಲ್ಲ. ಹೀಗಾಗದಂತೆ ನೋಡಿಕೊಳ್ಳಬೇಕು.

ಅಗೆಗಳನ್ನು ಒಂದು ಸ್ಥಳದಿಂದ ಕಿತ್ತು ಇನ್ನೊಂದು ಸ್ಥಳದಲ್ಲಿ ನೆಡುವಾಗ ಅವುಗಳ ಬೇರುಗಳಿಗೆ ಅಪಾಯವಾಗದಂತೆ ಆದಷ್ಟು ಪ್ರಯತ್ನ ಮಾಡಬೇಕು. ಮಣ್ಣಿನಗೂಡ ಕಿತ್ತು ನೆಡುವದು ಒಳ್ಳೇದು. ಬೇರುಗಳನ್ನು ಹರಿಯುವದೂ, ಗಂಟು ಹಾಕುವದೂ ತೀರ ತಪ್ಪು.

ಇದೀಗ ಬೀಜಗಳಿಂದ ಅಗೆಗಳನ್ನು ಮಾಡಿ ನೆಡುವ ಬಗೆಯು. ಕೊಂಬೆ, ಮರಿ, ಗೊಟೆ ಮುಂತಾದವುಗಳಿಂದ ಗಿಡಗಳನ್ನು ಬೆಳೆಸುವ ಕ್ರಮವನ್ನು ಇನ್ನು ವಿವರಿಸುವಾ.

**ಮರಿಗಳು :—** ಎಷ್ಟೋ ಗಿಡಗಳ ಬುಡದಲ್ಲಿ ಬೇರುಳ್ಳ ಟಿಸಿಲುಗಳು ಒಡೆಯುತ್ತವೆ. ಇವು ಮಣ್ಣಿನಲ್ಲಿ ಮುಖ್ಯ ಗಿಡಕ್ಕೆ ಅಂಟಿಕೊಂಡಿರುತ್ತವೆ. ಇವುಗಳನ್ನು ಮುಖ್ಯ ಗಿಡದಿಂದ ಬೇರೆ ಮಾಡಿದರೆ, ಇವುಗಳಿಗೆ ಬೇರು, ಟೊಂಗೆ, ಎಲೆಗಳಿದ್ದು ಇವು ಸಂಪೂರ್ಣ ಗಿಡಗಳೆಂಬದು ಸ್ಪಷ್ಟವಾಗಿ ಕಂಡು ಬರುತ್ತದೆ. ಇವುಗಳಿಗೇ ಮರಿಗಳೆಂದು ಸಾಮಾನ್ಯವಾಗಿ ಅನ್ನುತ್ತಾರೆ. ಬಾಳೆ, ಪರಂಭಾಳೆ ಮುಂತಾದ ಗಿಡಗಳಿಂದ ಮರಿಗಳು ಹೊರಡುತ್ತವೆ. ಮರಿಗಳನ್ನು ನೆಟ್ಟು ಹೊಸ ಗಿಡಗಳ ತೋಟವನ್ನು ತಯಾರಿಸಲು ಬರುತ್ತದೆ. ಪರಂಭಾಳೆಯಲ್ಲಿ ಹಣ್ಣಿನ ದಂಟಿನಲ್ಲೂ, ತುದಿಯಲ್ಲೂ ಮರಿಗಳು ಒಡೆಯುತ್ತವೆ. ಪರಂಭಾಳೆಯ ಹಣ್ಣು "ಗಿಡದ ಮೇಲೆ ಹಣ್ಣು, ಹಣ್ಣಿನ ಮೇಲೆ ಗಿಡ" ಎಂಬಂತಿರುತ್ತದೆ. ಹೀಗೆ ಒಡೆಯುವ ಮರಿಗಳಿಗೆ ಬೇರು ಇರುವದಿಲ್ಲ. ಆದರೆ ಅವನ್ನು ಮಣ್ಣಿನಲ್ಲಿ ನೆಟ್ಟರೆ ಬೇರು ಒಡೆಯುತ್ತದೆ.

**ಕೊಂಬೆಗಳು :—** ಗಿಡಗಳ ಎಳೆ ಟೊಂಗೆಗಳು ಅರ್ಧಮರ್ಧ ಬಲಿತು ತುಸು ಕೆಂದು ವರ್ಣದವಾದ ಬಳಿಕ, ಅವನ್ನು ಕತ್ತರಿಸಿ ನೆಟ್ಟರೆ ಅವು ಬೇರು ಕೊಟ್ಟು ಬೆಳೆಯಲಾರಂಭಿಸುವದು ಅಪರೂಪವಲ್ಲ. ಕೆಲವು ಗಿಡಗಳಲ್ಲಿ ಎಳೆ ಟೊಂಗೆಗಳನ್ನೇ ನೆಡಬೇಕಾಗುತ್ತದೆ ಈ ಟೊಂಗೆಗಳಲ್ಲಿ ಗಿಡಗಳ ಬೆಳವಣಿಗೆಗೆ ಅವಶ್ಯವಾದ ಅನ್ನ ನೀರುಗಳ ಸಂಚಯವಿರುತ್ತದೆ. ಮತ್ತು ಅನುಕೂಲ ಪರಿಸ್ಥಿತಿಯೊದಗಿದೆ ಕೂಡಲೆ ಅದರ ಉಪಯೋಗವಾಗುತ್ತದೆ. ಈ ಸಂಚಯವು ಕಡಿಮೆ

ಯಾದ ಬಳಿಕ ಹೆಚ್ಚಿನ ಅನ್ನ ನೀರುಗಳನ್ನು ಹೀರಿಕೊಳ್ಳುವದಕ್ಕಾಗಿ ಬೇರುಗಳ ನಿರ್ಮಾಣವಾಗಿ ಗಿಡಗಳು ಬದುಕಿ ಬಾಳುತ್ತವೆ.

ಕೊಂಬೆಗಳನ್ನು ಕತ್ತರಿಸಿ ನೆಡುವದು ಮಡಿಗಳಲ್ಲಿ. ಬೀಜ ಬಿತ್ತಲಿಕ್ಕೆ ಮಾಡುವಂತೆ ಮಡಿಗಳನ್ನು ಮಾಡಬೇಕು. ಕೊಂಬೆಗಳನ್ನು ೮—೧೦ ಇಂಚು ಉದ್ದವಿಡಬೇಕು. ಅವುಗಳ ಮೇಲೆ ಐದಾರು ಕಣ್ಣುಗಳಿರಬೇಕು. ಕೊಂಬೆಯ ಕೆಳಭಾಗವನ್ನು ಕಣ್ಣಿಗೆ ಹತ್ತಿ ಓರೆಯಾಗಿ ಕತ್ತರಿಸಬೇಕು. ತುದಿಯನ್ನು ಎರಡು ಕಣ್ಣುಗಳ ನಡುವೆ ಸಪಾಟಾಗಿ ಕತ್ತರಿಸಬೇಕು. ಹೀಗೆ ಮಾಡಿದರೆ ಕೊಂಬೆಗಳ ತುದಿಯು ಒಣಗಿ ಮೇಲಿನ ಕಣ್ಣು ಹಾಳಾಗುವದಿಲ್ಲ ಬೇರು ಬೇಗನೆ ಮೂಡುತ್ತದೆ. ಹೀಗೆ ತಯಾರಾದ ಕೊಂಬೆಗಳನ್ನು ಮಡಿಯಲ್ಲಿ ಸಾಲಿನಲ್ಲಿ ಅರ್ಧ ಹುಗಿದು ನೆಡಬೇಕು. ನೆಡುವಾಗ ಕಣ್ಣುಗಳು ಮೇಲ್ಮುಖವಾಗಿರಬೇಕು. ಎರಡೂ ಬದಿಗಳಿಂದ ಮಣ್ಣು ಒತ್ತಿ ನೀರು ಬೇಕಾದಷ್ಟು ಹಾಕಬೇಕು. ಕೊಂಬೆಗಳನ್ನು ತುಸು ಓರೆಯಾಗಿ ಉತ್ತರಕ್ಕೆ ತುದಿ ಮಾಡಿ ನೆಟ್ಟರೆ ಬಿಸಿಲಿನ ಜೋರಿನಿಂದ ಅವುಗಳಿಗಾಗುವ ಬಾಧೆಯು ಕಡಿಮೆಯಾಗುತ್ತದೆ. ಮಳೆಗಾಲದ ಆರಂಭದಲ್ಲಿ ಕೊಂಬೆಗಳನ್ನು ನೆಡುವದು ಉತ್ತಮ. ಇದು ಅನುಕೂಲವಲ್ಲದಿದ್ದರೆ ಗಿಡಗಳು ಚಿಗಿಯುವ ಸಮಯದಲ್ಲಿ ಬೇಕಾದಾಗ ಕೊಂಬೆಗಳನ್ನು ನೆಡಬಹುದು. ನೆಟ್ಟ ಒಂದೆರಡು ತಿಂಗಳಲ್ಲಿ ಕೊಂಬೆಗಳು ಚಿಗಿತು ಬೇರೊಡೆಯುತ್ತವೆ. ಮುಂದೆ ಬೇಕಾದಾಗ ಅವುಗಳನ್ನು ಕಿತ್ತು ತೋಟದಲ್ಲಿ ನೆಡಬಹುದು. ದ್ರಾಕ್ಷೆ, ಪೇರಲ, ಡಾಳಿಂಬ, ಅಂಜೀರ, ಮುಂತಾದ ಹಣ್ಣಿನ ಗಿಡಗಳನ್ನು ಕೊಂಬೆ ನೆಟ್ಟು ಬೆಳೆಸುತ್ತಾರೆ.

**ಗೂಟಿ :**—ಕೊಂಬೆಗಳನ್ನು ಮೂಲ ಗಿಡದಿಂದ ಸಂಪೂರ್ಣವಾಗಿ ಮೊದಲೇ ಕತ್ತರಿಸಿ ನೆಡಬೇಕಾಗುತ್ತದೆ ಇದರಿಂದ ಎಷ್ಟೋ ಜಾತಿಯ ಗಿಡಗಳ ಕೊಂಬೆಗಳು ಬದುಕುವದಿಲ್ಲ ಬೇರೊಡೆಯುವ ಪೂರ್ವದಲ್ಲೇ ಒಣಗಿ ಹೋಗುತ್ತವೆ. ಇಂಥ ಗಿಡಗಳಲ್ಲಿ ಕೊಂಬೆಗೆ ಆರಿಸಬೇಕಾದಂಥ ಟೊಂಗೆಗಳನ್ನೇ ಆರಿಸಿ, ಅವುಗಳನ್ನು ಕತ್ತರಿಸದೆ, ಅವುಗಳ ಮೇಲೆ ಸುಮಾರು ಎರಡು ಇಂಚು ಉದ್ದವಾಗಿ ಸುತ್ತಲು ತೊಗಟೆಯನ್ನೆಲ್ಲ ತೆಗೆಯಬೇಕು. ಒಳಗಿನ ಎಲುಬಿಗೆ ನೋವಾಗಗೊಡಬಾರದು. ಮತ್ತು ತುಸು ಜಿಗಟು ಮಣ್ಣಿನೊಡನ ಸಗಣಿಯನ್ನು ಸಮಭಾಗವಾಗಿ ಕಲೆಸಿ, ತೊಗಟೆಯನ್ನು ತೆಗೆದ ಭಾಗದಲ್ಲಿ ದಪ್ಪವಾಗಿ ಲೇಪಿಸಬೇಕು. ಮೇಲಿಂದ ಗೋಣೀ ಚೀಲದ ತುಂಡನ್ನಾಗಲಿ, ಬೇರೆ ಅರಿವೆಯ ತುಂಡನ್ನಾಗಲಿ ಕಟ್ಟಿ ಅದರ ಮೇಲೆ ದಿನಾಲು ಒಂದೆರಡಾವರ್ತಿ ನೀರು ಹಾಕುತ್ತಿರಬೇಕು. ಸುಮಾರು ಎರಡು ತಿಂಗಳಾದ ಬಳಿಕ ಒಳಗಿಂದ ಬೇರುಗಳು ಅರಿವೆಯ ಹೊರಬದಿಗೆ ಒಡೆದು ಬರುವದು ಕಾಣುವದು. ಮತ್ತು ಆಗ ಆ ಟೊಂಗೆಯನ್ನು ಅರಿ




ಆಕೃತಿ ೧. **ಗೂಟಿ ಕಟ್ಟುವದು.**

ಅ ಟೊಂಗೆಯ ಮೇಲಿನ ತೊಗಟೆಯನ್ನು ತೆಗೆದು ಮೇಲೆ ಮಣ್ಣು ಒರೆಸಿ ಅರಿವೆಯ ತುಂಡಿನಿಂದ ಕಟ್ಟಿದೆ.

ಬ. 'ಅ'ದ **ಮೇಲೆ** ನೀರಿನ ಹನಿಗಳು ಬೀಳಲಿಕ್ಕೆಂದು ನೀರು ತುಂಬಿದ ಮಡಿಕೆಯನ್ನು ತೂಗಬಿಟ್ಟಿದೆ

ಕ. **ಗೂಟಿ** ಕಟ್ಟುವದಕ್ಕಾಗಿ ಟೊಂಗೆಯ ಮೇಲೆ ಸುತ್ತಲೂ ತೊಗಟೆಯನ್ನು ತೆಗೆದಿದೆ.

ಡ. ಗೂಟಿಯಿಂದ ಬೇರುಗಳು ಮೂಡಿದ ಬಳಿಕ ಟೊಂಗೆಯನ್ನು ಕತ್ತರಿಸುವ ಸ್ಥಳವು.

[ಪಾನು ೩೪.




ಆಕೃತಿ ೨. ನಾಲಿಗೆ ಗೂಟಿ.

ಅ. ಟೊಂಗೆಯು ಕೆಳಬದಿಗೆ ನಾಲಿಗೆಯನ್ನು ಎಳಿಸಿ ಮಣ್ಣಿನಲ್ಲಿ ಹೂಳಿದೆ.

ಬ. ಟೊಂಗೆಯು ಮೇಲಕ್ಕೆ ಏಳಬಾರದೆಂದು ಇಟ್ಟಿರುವ ಕಲ್ಲು.

ಕ. ಬೇರೊಡೆದ ಬಳಿಕ ಟೊಂಗೆಯನ್ನು ಕತ್ತರಿಸುವ ಸ್ಥಳ.

[ ಪಾನು ೩೫.

ಪೆಯ ಕೆಳಬದಿಗೆ ಕತ್ತರಿಸಿ, ಬೇಕಾದಲ್ಲಿ ನೆಡಬೇಕು. ಅರಿವೆಯನ್ನು ಬಿಚ್ಚುವ ಅವಶ್ಯವಿಲ್ಲ. ನೆಟ್ಟ ಬಳಿಕ ಅದು ಕೊಳೆದು ಹೋಗುತ್ತದೆ.

ಮಣ್ಣು ಸೆಗಣಿಗಳ ಮಿಶ್ರಣದ ಬದಲಾಗಿ ಶಕ್ಯವಿದ್ದರೆ ಹಾಂಸವನ್ನು ಉಪಯೋಗಿಸಬಹುದು. ತೊಗಟೆಯನ್ನು ತೆಗೆದು ಕಟ್ಟಿಟ್ಟ ಭಾಗವು ಒಣಗಗೊಡಬಾರದೆಂಬದು ಮಹತ್ವದ್ದು. ಈ ಭಾಗದ ಮೇಲ್ಗಡೆಗೆ ಸಣ್ಣದೊಂದು ಮಡಿಕೆಯನ್ನು ತೂಗ ಹಾಕಿ, ಅದರ ಬುಡದಲ್ಲಿ ಸಣ್ಣ ತೂತು ಕೆಡವಿ, ಅದರಲ್ಲಿ ನೀರು ತುಂಬಿ, ಆ ನೀರು ತೂತಿನೊಳಗಿಂದ ಹನಿ ಹನಿ ಬಸಿದು ಅರಿವೆಯ ಮೇಲೆ ಬೀಳುತ್ತಿರುವಂತೆ ವ್ಯವಸ್ಥೆ ಮಾಡುತ್ತಾರೆ. ಇದರಿಂದ ಅರಿವೆಯೊಳಗಿನ ಮಣ್ಣಾಗಲಿ, ಹಾಂಸವಾಗಲಿ ಎಂದೂ ಒಣಗುವದಿಲ್ಲ ಪೇರಲ, ಚಿಕ್ಕೂ, ಅಂಜೀರ ಮುಂತಾದ ಗಿಡಗಳನ್ನು ಗೂಟಿಯಿಂದ ಬೆಳೆಸಬಹುದು

**ನಾಲಿಗೆ ಗೂಟಿ :—**ಇದು ಗೂಟಿಯಲ್ಲೇ ಒಂದು ವಿಧವು. ಗಿಡಗಳ ಟೊಂಗೆಗಳು ನೆಲಕ್ಕೆ ಮುಟ್ಟುವಂತೆ ಬಗ್ಗಿಸಿ ಕಟ್ಟಿಕೊಳ್ಳಬೇಕು. ಮತ್ತು ಗೂಟಿಗೆ ಆರಿಸುವಂತೆ ಟೊಂಗೆಗಳನ್ನು ಆರಿಸಿ, ಚೂರಿಯಿಂದ ಟೊಂಗೆಯ ಕೆಳಬದಿಗೆ ಗೆಣ್ಣಿನೊಳಗಿಂದ ಹಾಯುವಂತೆ ಸುಮಾರು ಎರಡು ಇಂಚು ಉದ್ದವಾಗಿ ಸೀಳಬೇಕು. ಸೀಳಿದ ಮುಖವು ಗಿಡದ ಬುಡದ ಕಡೆಗೆ ತೆರೆದಿರಬೇಕು. ಮತ್ತು ಸೀಳಿದ ಭಾಗವು ಟೊಂಗೆಯ ಅರ್ಧದಷ್ಟು ದಪ್ಪವಿರಬೇಕು. ಸೀಳಿದ ಭಾಗಗಳು ಕೂಡಿ ಒಂದಾಗದಂತೆ ಸಣ್ಣದೊಂದು ಕಡ್ಡಿಯನ್ನು ಅವುಗಳ ನಡುವೆ ಅಡ್ಡವಾಗಿ ಹಾಕಿ, ಈ ಭಾಗವನ್ನು ನೆಲದಲ್ಲಿ ಮಣ್ಣು ಕೆದರಿ ಹುಗಿಯಬೇಕು. ಅದರ ಮೇಲೆ ಸಣ್ಣದೊಂದು ಕಲ್ಲು ಹೇರಿದರೆ, ಕಲ್ಲಿನ ಭಾರದಿಂದ ಟೊಂಗೆಯು ಅತ್ತಿತ್ತ ಸರಿದಾಡುವದಿಲ್ಲ ಇದಕ್ಕೆ ದಿನಾಲು ನೀರು ಹಾಕುತ್ತಿದ್ದರೆ ಸುಮಾರು ಎರಡು ತಿಂಗಳಲ್ಲಿ ಸೀಳಿನ ನಾಲಿಗೆಗೆ ಬೇರೊಡೆಯುತ್ತದೆ ಬೇಕಾದರೆ ಬೇರುಗಳು ಒಡೆದಿವೆಯೋ ಇಲ್ಲವೋ ಎಂಬದನ್ನು ಟೊಂಗೆಯನ್ನು ಅಲ್ಲಾಡಗೊಡದೆ ಮಣ್ಣು ಕೆದರಿ ನೋಡಿ ಖಾತ್ರಿ ಮಾಡಿಕೊಳ್ಳಬಹುದು ಬೇರು ಮೂಡಿದ ಮೇಲೆ, ಟೊಂಗೆಯನ್ನು ತಾಯಿ ಗಿಡದಿಂದ ಬೇರೆ ಮಾಡಬೇಕು. ಹುಗಿದ ಭಾಗದ ಕೆಳಗಡೆಗೆ ಅಂದರೆ ತಾಯಿ ಗಿಡದ ಕಡೆಗೆ ಒಂದೆರಡು ಇಂಚು ಬಿಟ್ಟು, ಅದನ್ನು ಅರ್ಧ ಕತ್ತರಿಸುವಂತೆ ಕಚ್ಚು ಮಾಡಬೇಕು. ಮುಂದೆ ಎಂಟು ಹತ್ತು ದಿನಗಳಾದ ಮೇಲೆ ಕಚ್ಚನ್ನು ಇನ್ನಷ್ಟು ಕತ್ತರಿಸಬೇಕು. ಮತ್ತು ಮುಂದೆ ಎಂಟು ಹತ್ತು ದಿನಗಳಲ್ಲಿ ಟೊಂಗೆಯನ್ನು ಪೂರಾ ಕತ್ತರಿಸಿ, ಕಿತ್ತು ಬೇಕಾದಲ್ಲಿ ನೆಡಬಹುದು. ಟೊಂಗೆಗಳು ನೆಲಕ್ಕೆ ಮುಟ್ಟುವಂತೆ ಬಗ್ಗಿಸುವದು ಸಾಧ್ಯವಾಗದಿದ್ದಲ್ಲಿ ಬೀಜವನ್ನು ಬಿತ್ತಲಿಕ್ಕೆ ತಯಾರಿಸುವಂತೆ ಚೋರಿಗೆಗಳನ್ನು ತಯಾರಿಸಿ, ಎತ್ತರದ ಮೇಲೆ ಬಿಗುವಾಗಿ ಕಟ್ಟಿ

ಅವುಗಳಲ್ಲಿ ಸೀಳಿದ ಟೊಂಗೆಗಳನ್ನು ನೆಲದಲ್ಲಿ ಹುಗಿಯುವಂತೆ ಹುಗಿದು ಬೇರು ತರಿಸಬಹುದು. ನಿಂಬೆ, ಚಿಕ್ಕೂ, ಪೇರಲ, ಕಂಚಿ ಮುಂತಾದ ಗಿಡಗಳನ್ನು ನಾಲಿಗೆ ಗೂಟಿಯಿಂದ ಬೆಳೆಸಬಹುದು.

ಗೂಟಿ, ನಾಲಿಗೆ ಗೂಟಿಗಳಲ್ಲಿ ಟೊಂಗೆಗಳಿಗೆ ತಾಯಿ ಗಿಡದಿಂದ ಆಹಾರವು ಕಡೆಯುವರೆಗೂ ದೊರೆಯುತ್ತದೆ. ತಾಯಿ ಗಿಡದಿಂದ ಸಿಗುವ ಆಹಾರವನ್ನು ಸ್ವಲ್ಪ ಸ್ವಲ್ಪವಾಗಿ ಕಡಿಮೆ ಮಾಡಿ, ಟೊಂಗೆಗಳಿಗೆ ಬೇರೊಡೆದು ಅವು ಸ್ವತಂತ್ರ ಜೀವನವನ್ನು ಸಾಗಿಸಲು ಶಕ್ತವಾದ ಬಳಿಕ, ತಾಯಿ ಗಿಡದಿಂದ ಅವು ಪೂರಾ ಕತ್ತರಿಸಲ್ಪಡುತ್ತವೆ. ಆದ್ದರಿಂದ ಕೊಂಬೆಗಳು ಬದುಕದಿದ್ದಲ್ಲಿ ಗೂಟಿ ಮತ್ತು ನಾಲಿಗೆ ಗೂಟಿಗಳು ಬದುಕುತ್ತವೆ.

ಇವಿಷ್ಟು ಒಂದೇ ಗಿಡದ ಭಾಗಗಳಿಂದ ಹೊಸ ಗಿಡಗಳನ್ನುಂಟುಮಾಡುವ ವಿಧಗಳು. ಇನ್ನು ಎರಡು ಬೇರೆ ಬೇರೆ ಗಿಡಗಳ ಭಾಗಗಳನ್ನು ಒಂದಕ್ಕೊಂದು ಜೋಡಿಸಿ ಬೆಳೆಸುವದು ಹ್ಯಾಗೆಂಬದನ್ನು ನೋಡುವ.

**ಕೊಡಿ ಕಟ್ಟುವದು :—**ಒಂದು ಗಿಡದ ಟೊಂಗೆಯ ತುದಿಯನ್ನು ಇನ್ನೊಂದು ಗಿಡದ ಬುಡಕ್ಕೆ ಜೋಡಿಸಿ ಅದು ಆ ಬುಡದ ಮೇಲೆ ಬೆಳೆಯುವಂತೆ ಮಾಡುವದಕ್ಕೆ **ಕೊಡಿ ಕಟ್ಟುವದು** ಅಥವಾ ಕಸೀ ಕಟ್ಟುವದು ಅನ್ನುತ್ತಾರೆ. ಇದರಲ್ಲಿ ಮೊದಲನೇ ಗಿಡದ ಟೊಂಗೆಯೂ ಎರಡನೇ ಗಿಡದ ಬುಡವೂ ಒಂದಾಗಿ ಕೂಡಿ, ಮುಂದೆ ಒಂದೇ ಸಂಪೂರ್ಣ ಗಿಡವು ಉಂಟಾಗುತ್ತದೆ. ಮೊದಲನೇ ಗಿಡದ ಟೊಂಗೆಗೆ **ಕೊಡಿ** ಎಂತಲೂ, ಅದು ಬೆಳೆಯುವ ಬುಡಕ್ಕೆ **ಬೊಡ್ಡೆ** ಎಂತಲೂ ಅನ್ನಬಹುದು. ಅಡವಿಯಲ್ಲಿ ಸ್ವಾಭಾವಿಕವಾಗಿ ದಟ್ಟವಾಗಿ ಬೆಳೆಯುವ ಮರಗಳ ಟೊಂಗೆಗಳು ಒಂದಕ್ಕೊಂದು ಹತ್ತಿ ತಿಕ್ಕಾಡಿ ಕಾಲಾಂತರದಲ್ಲಿ ಜೋಡಿಸಿ ಹೋದದ್ದನ್ನು ಕಂಡು ಮಾನವನಿಗೆ ಕೊಡಿ ಕಟ್ಟುವ ಕ್ರಮವು ಸೂಚಿಸಿರಬಹುದು. ಹೀಗೆ ಸ್ವಾಭಾವಿಕವಾಗಿ ಜೋಡಿಸಲ್ಪಟ್ಟ ಮರಗಳನ್ನು ಈಗಾದರೂ ಬೇಕಾದಷ್ಟು ನೋಡಬಹುದು. ಮುಂದೆ ಅನುಭವದಿಂದ ಕೊಡಿ ಕಟ್ಟುವ ಕಲೆಯಲ್ಲಿ ಅನೇಕ ಸಂಗತಿಗಳನ್ನು ಅವನು ಮನಗಂಡಿರುವನು. ಎಷ್ಟೋ ಸುಧಾರಣೆಗಳನ್ನೂ ಮಾಡಿರುವನು. ಹೊಸ ಪದ್ಧತಿಗಳನ್ನೂ ಹಾಕಿ ಕೊಟ್ಟಿರುವನು. ಕೊಡಿ ಕಟ್ಟುವದರಲ್ಲಿ ಮುಖ್ಯವಾದ ತತ್ವಗಳು ಯಾವವೆಂದರೆ :—

**೧. ಕೊಡಿ ಕಟ್ಟುವದು ಕೆಂಬಿಯಮ್ ಅಥವಾ ಕಾಷ್ಠ ಜನಕ ಥರವು ಇರುವ ವನಸ್ಪತಿಗಳಲ್ಲಿ ಮಾತ್ರ ಸಾಧ್ಯವು.**



ಬೆಳವಲ ಗಿಡದ ಬೊಡ್ಡೆಯ ಮೇಲೆ ಕಿತ್ತಳೆಯ ಕೊಡಿಗಳನ್ನು ಕಟ್ಟಿದೆ.

*(Courtesy: Bom. Dept. Agri.)* *(To face page No. 37)*

ದ್ವಿದಲ ವನಸ್ಪತಿಗಳಲ್ಲಿ ಈ ಥರವು ಸರಿಯಾದ ವರ್ತುಳಾಕಾರ ದಲ್ಲಿ ಇರುವದರಿಂದ ಕೊಡಿ ಕಟ್ಟುವದು ಸುಲಭಸಾಧ್ಯವಾಗಿದೆ.

೨. ಬೊಡ್ಡೆಗೂ ಕೊಡಿಗೂ ಆದಷ್ಟು ಸಮೀಪ ಬಂಧುತ್ವ ವಿರತಕ್ಕದ್ದು.

(ಅ) ಒಂದೇ ಜಾತಿಗೆ ಸೇರಿದ ಬೇರೆ ಬೇರೆ ಉಪಜಾತಿಗಳನ್ನು ಕೊಡಿಕಟ್ಟಿ ಜೋಡಿಸುವದು ಬಹು ಸುಲಭ.

(ಬ) ಒಂದೇ ವರ್ಗದ ಬೇರೆ ಬೇರೆ ಜಾತಿಗಳಿಗೆ ಸೇರಿದ ಗಿಡಗಳನ್ನು ಕೊಡಿ ಕಟ್ಟಿ ಜೋಡಿಸ ಬಹುದು.

(ಕ) ಒಂದೇ ಜನಾಂಗದ ಬೇರೆ ಬೇರೆ ವರ್ಗಗಳನ್ನು ಜೋಡಿಸುವದು ಸಾಧ್ಯ ವಾಗ ಬಹುದಾದರೂ ಬಹು ಕಷ್ಟ.

(ಡ) ಬೇರೆ ಬೇರೆ ಜನಾಂಗದ ಗಿಡಗಳನ್ನು ಕೊಡಿ ಕಟ್ಟಿ ಜೋಡಿಸುವದು ಅಸಾಧ್ಯ. ಉದಾ:—(ಅ) ದೊಡ್ಡ ನಿಂಬೆ, ಸಣ್ಣ ನಿಂಬೆ ಮುಂತಾದವು. (ಬ) ನಿಂಬೆ, ಕಿತ್ತಳೆ, ಮೋಸಂಬಿ, ಮಾದಲ ಮುಂತಾದವು. (ಕ) ಕಿತ್ತಳೆ, ಬೆಳವಲ; ಮತ್ತು ಚಿಕ್ಕೂ, ಬಕುಳ ಮುಂತಾದವು. (ಡ) ಮಾವು, ದಾಳಿಂಬ, ನೇರಲ, ಚಿಕ್ಕೂ ಮುಂತಾದವು

೩. ಬೊಡ್ಡೆಯೂ ಕೊಡಿಯೂ ಕೊಡಿ ಕಟ್ಟುವದಕ್ಕೆ ಯೋಗ್ಯವಾದ ಸ್ಥಿತಿಯಲ್ಲಿ ಇರಬೇಕು. ಇವೆರಡೂ ಸರಿಯಾಗಿ ಬೆಳೆದಿರ ಬೇಕು. ತೀರ ಎಳೆಯವೂ ತೀರ ಬೆಳೆದವೂ ಇರಬಾರದು. ಎರಡರಲ್ಲೂ ತೊಗಟೆಯು ಸುಲಭವಾಗಿ ಸುಲಿಯುವಂತಿದ್ದು, ಎರಡೂ ರಸವತ್ತಾಗಿರಬೇಕು. ಕೊಡಿಯ ಮೇಲಿನ ಕಣ್ಣು ಚಿಗಿಯಲಿಕ್ಕೆ ತಯಾರಾಗಿ ಉಬ್ಬಿರಬೇಕು. ಆದರೆ ಚಿಗಿತಿರಬಾರದು.

ಈ ತತ್ವಗಳನ್ನು ಅನುಸರಿಸಿ ಕೊಡಿ ಕಟ್ಟುವದನ್ನು ಮನುಷ್ಯನು ಸಾಧಿಸಿಕೊಂಡು ಅವರಲ್ಲಿ ಅನೇಕ ವಿಧಗಳನ್ನು ಹುಟ್ಟಿಸಿದ್ದಾನೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ:—

**ಭೆಟ್ಟಿ ಕೊಡಿ:**—ಬೊಡ್ಡೆಯೂ ಕೊಡಿಯೂ ಒಂದಕ್ಕೊಂದು ಸಮೀಪ ತರಲ್ಪಟ್ಟು, ಎರಡು ಕೋಲುಗಳನ್ನು ಜೋಡಿಸಿ ಕಟ್ಟುವಂತೆ ಜೋಡಿಸಲ್ಪಡುವದರಿಂದ ಈ ಪದ್ಧತಿಗೆ "ಭೆಟ್ಟಿ ಕೊಡಿ" ಎಂಬ ಹೆಸರು. ಇದರಲ್ಲಿ ನಿಜವಾಗಿಯೂ ಬೊಡ್ಡೆ ಕೊಡಿಗಳೆರಡೂ ಒಂದಕ್ಕೊಂದು ಅಂಟಿಕೊಳ್ಳುತ್ತವೆ. ಒಂದ

ರೊಳಗೊಂದು ಹೋಗುವದಿಲ್ಲ. ಬೊಡ್ಡೆಯನ್ನು ಮೊದಲು ಚೋರಿಯಲ್ಲಿ ಬೀಜ ಬಿತ್ತಿ ತಯಾರಿಸಿಕೊಳ್ಳುತ್ತಾರೆ. ಬೀಜವನ್ನು ಚೋರೆಯ ಮಧ್ಯದಲ್ಲಿ ಬಿತ್ತದೆ, ಒಂದು ಅಂಚಿಗೆ ಹತ್ತಿ ಬಿತ್ತುತ್ತಾರೆ. ಹೀಗೆ ಮಾಡುವದರಿಂದ ಬೊಡ್ಡೆಯನ್ನೂ ಕೊಡಿಯನ್ನೂ ಒಂದಕ್ಕೊಂದು ಅಂಟಿಸುವದು ಸುಲಭವಾಗುತ್ತದೆ. ಬೊಡ್ಡೆಯು ಚೋರೆಯಲ್ಲಿ ಬೆಳೆದು ಒಂದು ವರ್ಷದ್ದಾಗಲು ಅದು ಸುಮಾರು ಅರ್ಧ ಇಂಚು ಗಡುತರವಾಗುತ್ತದೆ. ಆಗ ಅದಕ್ಕೆ ಕೊಡಿ ಕಟ್ಟಬಹುದು.

ಹೀಗೆ ತಯಾರಾದ ಬೊಡ್ಡೆಯನ್ನು ಚೋರೆಯಲ್ಲೇ ಕೊಡಿಯ ಮರದ ಹತ್ತಿರಕ್ಕೆ ಒಯ್ದು, ಬೊಡ್ಡೆಯಷ್ಟೇ ಗಡುತರವಾದ ಕೊಡಿಯನ್ನು ಆರಿಸಬೇಕು. ಮತ್ತು ಅವೆರಡನ್ನೂ ಒಂದಕ್ಕೊಂದರ ಸಮೀಪ ತಂದು ಸೆಣಬಿನಿಂದ ಸೈಲಾಗಿ ಕಟ್ಟಿ ಒಂದು ವಾರದ ವರೆಗೆ ಹಾಗೇ ಇಡಬೇಕು. ಕೊಡಿಯ ಟೊಂಗೆಗಳು ಎತ್ತರವಾಗಿದ್ದರೆ, ಅವನ್ನು ನೆಲಕ್ಕೆ ಮುಟ್ಟುವಂತೆ ಬಗ್ಗಿಸಿ, ನೆಲದಲ್ಲಿ ಬಿಗಿಯಾಗಿ ಒಂದು ಗೂಟವನ್ನು ಬಡಿದು, ಆ ಗೂಟಕ್ಕೆ ಕತ್ತದಿಂದ ಕಟ್ಟಬೇಕು. ಹೀಗೆ ಬಗ್ಗಿಸಿ ಕಟ್ಟಿದರೆ ಬೊಡ್ಡೆಯ ಚೋರೆಯನ್ನು ನೆಲದ ಮೇಲೆ ಇಟ್ಟು ಕೊಡಿ ಕಟ್ಟುವದು ಸುಲಭ. ಟೊಂಗೆಯನ್ನು ಬಗ್ಗಿಸುವದಾಗದಿದ್ದರೆ, ಟೊಂಗೆಯಷ್ಟೇ ಎತ್ತರವಾದ ಅಟ್ಟವನ್ನು ಹಾಕಿ ಅದರ ಮೇಲೆ ಚೋರೆಗಳನ್ನಿಡುತ್ತಾರೆ. ಇವೆಲ್ಲದರ ಉದ್ದೇಶವು ಬೊಡ್ಡೆಯೂ ಕೊಡಿಯೂ ಒಂದಕ್ಕೊಂದು ಸಮೀಪಬರಬೇಕೆಂಬದೇ ಹೌದು ಇಲ್ಲವಾದರೆ ಅವು ಮುರಿದು ಹಾಳಾಗುತ್ತವೆ.

ಕೊಡಿ ಕಟ್ಟುವಾಗ ಬೊಡ್ಡೆಯ ಮೇಲೆ ಚೋರೆಯಿಂದ ಸುಮಾರು ಎಂಟು ಇಂಚು ಎತ್ತರದಲ್ಲಿ ಎರಡು ಇಂಚು ಉದ್ದ ಮೂರೆಂಟಾಂಶ ($\frac{೩}{೮}$) ಇಂಚು ಅಗಲ ಇರುವ ತೊಗಟೆಯನ್ನು ಒಳಗಿನ ಎಲುಬಿನ ಸಹಿತ ಕೆತ್ತುತ್ತಾರೆ. ಹೀಗೆ ಕೆತ್ತುವದರಿಂದ ತೊಗಟೆಯೊಳಕ್ಕಿರುವ ಕಾಷ್ಠಜನಕ ಥರವು ಕಾಣ ಬರುತ್ತದೆ. ಈ ಥರಕ್ಕೆ ಆದಷ್ಟು ಅಪಾಯವಾಗಬಾರದೆಂದೂ, ಕೆತ್ತಿದ ಭಾಗವು ಸ್ವಚ್ಛವಾಗಿರಬೇಕೆಂದೂ ಹದನಾದ ಚೂರಿಯನ್ನೇ ಕೆತ್ತಲಿಕ್ಕೆ ಉಪಯೋಗಿಸಬೇಕು. ಮತ್ತು ಕೊಡಿಯ ಮೇಲೂ ಅದು ಬೊಡ್ಡೆಯನ್ನು ಮುಟ್ಟುವ ಸ್ಥಳದಲ್ಲಿ ಬೊಡ್ಡೆಯ ಮೇಲಿನ ಕೆತ್ತಿಗೆಯಷ್ಟೇ ಉದ್ದ ಅಗಲ ಇರುವ ಭಾಗವನ್ನು ಕೆತ್ತಬೇಕು. ಬಳಿಕ ಇವೆರಡರ ಮೇಲಿನ ಕೆತ್ತಿದ ಭಾಗಗಳೂ ಒಂದಕ್ಕೊಂದು ಸರಿಯಾಗಿ ಹತ್ತಿ ಕೂಡುವಂತೆ ಜೋಡಿಸಿ, ಬಾಳೆ ಪಟ್ಟೆಯಿಂದ ಬಿಗಿಯಾಗಿ ಕಟ್ಟಬೇಕು. ಅದರ ಮೇಲೆ ಸೆಣಬಿನಿಂದ ಇನ್ನೊಮ್ಮೆ ಮತ್ತೂ ಬಿಗಿಯಾಗಿ ಕಟ್ಟಬೇಕು. ಹೀಗೆ ಕಟ್ಟುವದರಿಂದ ಕೊಡಿ ಬೊಡ್ಡೆಗಳು ಗಾಳಿಯಿಂದ ಅಲ್ಲಾಡುವಾಗ ಜಾರುವದಿಲ್ಲ. ಅವೆರಡರ ನಡುವೆ ಏನೂ ಸ್ಥಳ ಉಳಿಯುವದಿಲ್ಲ. ಅವುಗಳ ಸಂದು ಚನ್ನಾಗಿ ಕೂಡುತ್ತದೆ.




ಆಕೃತಿ ೩. ಭೆಟ್ಟಿ ಕೊಡಿ.

ಅ. ಬೊಡ್ಡೆ ಮತ್ತು ಕೊಡಿಗಳ ಸಂದು.

ಬ. ಬೊಡ್ಡೆಯ ಸಸಿಯು.

ಕ. ಕೊಡಿಯು.

[ ಪಾನು ೩೮,

ಸೆಣಬಿನ ಮೇಲಿಂದ ನಗಣಿ ಮಣ್ಣುಗಳನ್ನು ಸಮಾಂಶ ಮಿಶ್ರಣಮಾಡಿ ಲೇಪಿಸ ಬಹುದು. ಇದರಿಂದ ಒಳಗೆ ಕೆತ್ತಿದ ಬಾಗವು ಒಣಗುವದಿಲ್ಲ. ಲೇಪಿಸದಿದ್ದ ರೂ ಅಡ್ಡಿಯಿಲ್ಲ,

ಮುಂದೆ ಒಂದೂವರೆ ತಿಂಗಳ ತನಕ ಬೊಡ್ಡೆಯ ಚೋರೆಯಲ್ಲಿ ದಿನಾಲು ನೀರು ಹಾಕುತ್ತಿರಬೇಕು. ಬೊಡ್ಡೆ ಕೊಡಿಗಳನ್ನು ಜೋಡಿಸಿದ ಸಂದಿಗೆ ನೀರು ಹತ್ತದಂತೆ ನೋಡಿಕೊಳ್ಳಬೇಕು ಒಂದೂವರೆ ತಿಂಗಳಲ್ಲಿ ಕೊಡಿಯೂ ಬೊಡ್ಡೆ ಯೂ ಒಂದಾಗಿ ಬೆಳೆಯಲಾರಂಭಿಸುವವು. ಕೊಡಿಯನ್ನು ಅದರ ತಾಯಿಮರ ದಿಂದ ಬೇರೆ ಮಾಡಬೇಕು ಕೊಡಿಯನ್ನು ಸಂದಿನ ಕೆಳಬದಿಗೆ ಸುಮಾರು ಒಂದು ಇಂಚು ಬಿಟ್ಟು ಕತ್ತರಿಸುತ್ತಾರೆ ಇದನ್ನು ಒಮ್ಮೆಲೇ ಮಾಡುವದಿಲ್ಲ. ಕತ್ತರಿ ಸುವ ಜಾಗದಲ್ಲಿ ಕೊಡಿಯ ವ್ಯಾಸದ ಒಂದು ಮೂರಾಂಶದಷ್ಟು ಕಚ್ಚನ್ನು ಮೊದ ಲನೇ ಸಾರೆ ಮಾಡಿಡುತ್ತಾರೆ. ಮುಂದೆ ಹತ್ತುದಿನಗಳ ತರುವಾಯ ಅದೇ ಕಚ್ಚನ್ನು ಹೆಚ್ಚು ಕತ್ತರಿಸಿ ಎರಡು ಮೂರಾಂಶದಷ್ಟು ಮಾಡುತ್ತಾರೆ. ಮತ್ತು ಇದರ ಮುಂದೆ ಹತ್ತು ದಿನಗಳಲ್ಲಿ ಕೊಡಿಯನ್ನು ಪೂರಾ ಕತ್ತರಿಸುತ್ತಾರೆ. ಇದರ ಕಾರಣವೇನಂದರೆ, ಕೊಡಿಯು ಅದೇ ಹೊಸತಾಗಿ ಬೊಡ್ಡೆಯಕೂಡ ಸಂಯೋಗ ಹೊಂದಿರುತ್ತದೆ. ಮತ್ತು ಬೊಡ್ಡೆಯ ಬೇರುಗಳು ಹೀರಿಕೊಂಡ ಅನ್ನವನ್ನು ಉಪ ಯೋಗಿಸಲಾರಂಭಿಸಿದೆ. ಇಲ್ಲಿಯ ವರೆಗೆ ಅದರ ಪೋಷಣವೆಲ್ಲ ತಾಯಿ ಮರ ದಿಂದ ದೊರೆಯುತ್ತಿತ್ತು. ಈಗ ಎರಡರಿಂದಲೂ ದೊರೆಯುತ್ತದೆ. ಆದರೆ ಬೊಡ್ಡೆಯಿಂದ ದೊರೆಯುವ ಅನ್ನವು ಇನ್ನೂ ನಿಶ್ಚಯವಾಗಿಲ್ಲ. ಆದ್ದರಿಂದ ಒಮ್ಮೆಲೇ ಕೊಡಿಯನ್ನು ಕತ್ತರಿಸಿಬಿಟ್ಟರೆ, ಅದು ಸಾಯಬಹುದು. ಹಾಗೆ ಮಾಡದೆ, ತುಸು ತುಸು ಕತ್ತರಿಸಿ ಅದು ಸಾವಕಾಶವಾಗಿ ತಾಯಿ ಮರವನ್ನು ಬಿಟ್ಟು ಬೊಡ್ಡೆಯನ್ನು ಅವಲಂಬಿಸುವಂತೆ ಮಾಡುವದು ಅವಶ್ಯವಾಗಿರುತ್ತದೆ. ಮೊದಲನೇ ಕಚ್ಚು ಮಾಡಿದಾಗ ತಾಯಿ ಮರದಿಂದ ಬರುವ ಅನ್ನವು ಅದೇ ಪ್ರಮಾಣದಲ್ಲಿ ಕಡಿಮೆಯಾಯಿತಷ್ಟೇ. ಇದನ್ನು ತುಂಬಿಕೊಳ್ಳಲು ಕೊಡಿಯು ಬೊಡ್ಡೆಯ ಮೇಲೆ ಹೆಚ್ಚಿನ ಭಾರವನ್ನು ಹಾಕಬೇಕೆಂಬದು ಸಹಜ. ಈ ರೀತಿ ಕಡಿಮೆಯಾದ ಅನ್ನವು ಬೊಡ್ಡೆಯಿಂದ ತುಂಬಿ ಬರದಿದ್ದರೆ, ಕೊಡಿಯು ಬಾಡು ವದು. ಬಾಡಿದರೆ ಎರಡನೇ ಸಾರೆ ಕಚ್ಚನ್ನು ಮಾಡುವದು ಮುಂದೆ ಹಾಕಲ್ಪಡ ಬೇಕು. ಕೊಡಿಯು ತಿರುಗಿ ಹಸಿಯಾದ ಬಳಿಕ ಎರಡನೇ ಕಚ್ಚನ್ನು ಮಾಡ ಬೇಕು. ಆಗಲೂ ಕೊಡಿಯು ಬಾಡಬಹುದು. ಬಾಡಿದರೆ ಕೊಡಿಯನ್ನು ಪೂರಾ ಕತ್ತರಿಸುವದನ್ನು ಅದು ಚನ್ನಾಗಿ ಹಸಿಯಾಗುವ ವರೆಗೆ ಮುಂದೆ ಹಾಕಬೇಕು. ಕೊಡಿಯನ್ನು ಪೂರಾ ಕತ್ತರಿಸಿದ ಬಳಿಕ, ಕೊಡಿ ಸಹಿತವಾದ ಬೊಡ್ಡೆಯ

ಚೋರಿಯನ್ನು ನೆರಳುಳ್ಳ ತಂಪು ಸ್ಥಳದಲ್ಲಿ ತಿಂಗಳೊಪ್ಪತ್ತು ಇಡಬೇಕು. ಅಲ್ಲಿ ಕೊಡಿಯು ಬಾಡದಿದ್ದರೆ, ಅದು ಬೊಡ್ಡೆಯಿಂದ ತನಗೆ ಬೇಕಾದ ಅನ್ನವನ್ನು ಹೀರಿಕೊಳ್ಳುವದು ನಿಶ್ಚಿತವಾಯಿತೆಂದು ತಿಳಿಯಬಹುದು. ಮತ್ತು ಆ ಬಳಿಕ ಬೊಡ್ಡೆಯ ತುದಿಯನ್ನು ಸಂದಿನ ಮೇಲ್ಭಾಗದಲ್ಲಿ ಒಂದು ಇಂಚು ಬಿಟ್ಟು ಕತ್ತರಿಸಿ ಹಾಕಬೇಕು. ಮತ್ತು ಸಂದಿನ ಕೆಳಗೆ ಬೊಡ್ಡೆಯ ಮೇಲೆ ಮೂಡುವ ಚಿಗುರುಗಳನ್ನೆಲ್ಲ ಚಿವುಟಿ ಹಾಕಬೇಕು. ಯಾಕೆಂದರೆ ನಮಗೆ ಬೊಡ್ಡೆಯ ಮೇಲಿನ ಚಿಗುರುಗಳೂ ಟೊಂಗೆಗಳೂ ಬೇಕಾಗಿಲ್ಲ. ಅವರ ಮೇಲೆ ಕೊಡಿಯು ಬೆಳೆದು ಗಿಡವಾಗ ಬೇಕಾಗಿದೆ. ಬೊಡ್ಡೆಯ ಮೇಲೆ ಹೊಸತಾಗಿ ಬಂದ ಕೊಡಿಯು ಪುಷ್ಟವಾಗಿ ಬೆಳೆಯಬೇಕಾದರೆ, ಬೊಡ್ಡೆಯ ಬೇರುಗಳು ಶೋಷಿಸಿಕೊಂಡ ಅನ್ನವೆಲ್ಲ ಕೊಡಿಗೇ ಸಿಗಬೇಕು. ಬೊಡ್ಡೆಯ ಚಿಗುರುಗಳೂ ಟೊಂಗೆಗಳೂ ಅದಕ್ಕೆ ಪಾಲುದಾರರಾದರೆ ಅತಿಥಿಯಾದ ಕೊಡಿಯು ತುಸುಕಾಲದಲ್ಲಿ ತೂರಿ ಹಾಕಲ್ಪಡುವದು. ಭೆಟ್ಟಿ ಕೊಡಿಯ ಪದ್ಧತಿಯಲ್ಲಿ ನೂರಕ್ಕೆ ೯೦ ರ ವರೆಗೆ ಯಶಸ್ಸು ದೊರೆಯುವದು. ಎಲ್ಲ ಪದ್ಧತಿಗಳಲ್ಲಿ ಇದು ಬಹು ಸುಲಭವಾದದರಿಂದ ಇದೇ ಸಾಮಾನ್ಯವಾಗಿ ಅನುಸರಿಸಲ್ಪಡುತ್ತದೆ.

ಹೀಗೆ ತಯಾರಾದ ಕೊಡಿಯನ್ನು ನಾಲ್ಕಾರು ತಿಂಗಳು ಚೋರಿಯಲ್ಲೇ ಬೆಳೆಯಗೊಟ್ಟು, ಬಲಿತ ಬಳಿಕ, ಹೊಲದಲ್ಲಿ ನೆಡುತ್ತಾರೆ ನೆಡುವಾಗ ಚೋರಿಯನ್ನು ಒಡೆಯುತ್ತಾರೆ. ಅದರ ಒಳಗಿನ ಮಣ್ಣಿನ ಹೆಂಟೆಯನ್ನು ಒಡೆಯಗೊಡುವದಿಲ್ಲ ಹೆಂಟೆಯು ಒಡೆದರೆ ಬೇರುಗಳಿಗೆ ಅಪಾಯವಾಗುತ್ತದೆ. ನೆಟ್ಟ ಬಳಿಕ ಕೊಡಿಯ ಹತ್ತಿರ ಕೋಲು ನೆಟ್ಟು ಅದಕ್ಕೆ ಅದನ್ನು ಕಟ್ಟುತ್ತಾರೆ. ಇದರಿಂದ ಗಾಳಿಯ ಜೋರಿಗೆ ಕೊಡಿಯು ಮುರಿಯುವದಿಲ್ಲ. ನೆಡುವಾಗ ಕೊಡಿಯ ಸಂದು ಮಣ್ಣಿನ ಮೇಲೇ ಇರತಕ್ಕದ್ದು. ಸಂದಿನ ಮೇಲಿನ ಬಾಳೇ ಪಟ್ಟಿಯನ್ನೂ ನೆಣಬನ್ನೂ ಬಿಚ್ಚಿ ಹಾಕಬೇಕು.

**ನಾಲಿಗೆ ಕೊಡಿ :—** ಈ ಪದ್ಧತಿಯು ಭೆಟ್ಟಿ ಕೊಡಿಯ ಒಂದು ವಿಧವಾಗಿರುತ್ತದೆನ್ನಲು ಅಡ್ಡಿ ಇಲ್ಲ. ಇದರಲ್ಲಿ ಬೊಡ್ಡೆಯನ್ನು ಕೆತ್ತುವಾಗ ಮೇಲಿಂದ ಕೆಳಕ್ಕೆ ಚೂರಿಯನ್ನು ಎಳೆದು ನಾಲಿಗೆಯಂಥ ಭಾಗವನ್ನು ಏಳಿಸಿಡುತ್ತಾರೆ. ಈ ನಾಲಿಗೆಯ ಮೇಲಿನ ತೊಗಟೆಯನ್ನು ತುಸು ಕೆತ್ತುತ್ತಾರೆ. ಕೊಡಿಯನ್ನು ಕೆಳಗಿನಿಂದ ಮೇಲಕ್ಕೆ ಕೆತ್ತಿ ನಾಲಿಗೆಯನ್ನು ಏಳಿಸಿ, ಈ ನಾಲಿಗೆಯ ಹೊರ ಬದಿಯನ್ನು ತುಸು ಕೆತ್ತುತ್ತಾರೆ. ಹೀಗೆ ಕೆತ್ತಿದ ಎಳಿಕ ಬೊಡ್ಡೆಯ ಮೇಲಿನ ನಾಲಿಗೆಯು ಮೇಲ್ಮುಖವಾಗಿ ತೆರೆದಿರುತ್ತದೆ. ಕೊಡಿಯ ಮೇಲಿನ ನಾಲಿಗೆಯು ಕೆಳಮುಖವಾಗಿ ತೆರೆದಿರುತ್ತದೆ. ಕೊಡಿಯನ್ನೂ ಬೊಡ್ಡೆಯನ್ನೂ ಒಂದನ್ನೊಂದರ




ಆಕೃತಿ ೪. ಬಗಲ ಕೊಡಿ.

ಅ. ಬೊಡ್ಡೆಯ ಮೇಲೆ ತ್ರಿಕೋಣಾಕೃತಿ ತೊಗಟೆಯನ್ನು ಕತ್ತರಿಸಿ ಕೆಳಗಡೆಗೆ ಸೀಳಿದೆ.

ಬ. ಬೊಡ್ಡೆಯಲ್ಲಿ ಕೊಡಿಯನ್ನು ಕೂಡ್ರಿಸಿದೆ.

ಕ. ಕೊಡಿಯನ್ನು ಸರಿಯಾಗಿ ಕೆತ್ತಿ ಸಿದ್ಧಮಾಡಿದೆ.

ಡ. ಕೊಡಿಯನ್ನು ಕೂಡ್ರಿಸಿ ಕತ್ತದಿಂದ ಬಿಗಿದಿದೆ.

ಪಾನು ೪೧.

ಸಮೀಪ ತಂದು ಬೊಡ್ಡೆಯ ನಾಲಿಗೆಯೊಳಗೆ ಕೊಡಿಯ ನಾಲಿಗೆಯನ್ನು ಸಿಗಿಸಿ ಬಿಗಿಯಾಗಿ ಬಾಳೇ ಪಟ್ಟೆಯಿಂದಲೂ ಅದರ ಮೇಲೆ ಸೆಣಬಿನಿಂದಲೂ ಕಟ್ಟಿ ಬಿಡುತ್ತಾರೆ. ಕೆತ್ತಿದ ಬಾಗಗಳೆಲ್ಲ ಒಂದೇ ಅಳತೆಯವಿರಬೇಕು. ಇಲ್ಲವಾದರೆ ಕಾಷ್ಠ ಜನಕ ಥರಗಳು ಕೂಡುವದಿಲ್ಲ. ಕೊಡಿಯು ಬದುಕುವದಿಲ್ಲ. ಮುಂದೆ ಒಂದೂವರೆ ತಿಂಗಳಾದ ಬಳಿಕ ಕೊಡಿಯ ಬುಡವನ್ನು ಭೆಟ್ಟಿ ಕೊಡಿಯಲ್ಲಿ ಮಾಡುವಂತೆ ತುಸು ತುಸು ಕತ್ತರಿಸುತ್ತ ಅದರ ತಾಯಿ ಮರದಿಂದ ಬೇರೆ ಮಾಡುತ್ತಾರೆ. ಬಳಿಕ ಎರಡು ತಿಂಗಳ ತರುವಾಯ ಕೊಡಿಯು ಬೊಡ್ಡೆಯ ಮೇಲೆ ಬಲಿತ ಬಳಿಕ ಬೊಡ್ಡೆಯ ತುದಿಯನ್ನು ಕತ್ತರಿಸುತ್ತಾರೆ. ನಾಲಿಗೆ ಕೊಡಿಯಲ್ಲಿ ಇತರ ವಿಸ್ತಾರಗಳೆಲ್ಲ ಭೆಟ್ಟಿ ಕೊಡಿಯಲ್ಲಿರುವಂತೆಯೇ ಸರಿ.

ಈ ವಿಧದಲ್ಲಿ ಕಟ್ಟಿದ ಕೊಡಿಗಳು ನೂರಕ್ಕೆ ೯೫ರ ತನಕ ಬದುಕುತ್ತವಾದರೂ, ಕೊಡಿಯ ಸಂದಿನಲ್ಲಿ ಮೂರು ಪದರುಗಳಿರುವದರಿಂದ ಅದು ಸುಖಿಯಾಗಿಯೂ ಅಶಕ್ತವಾಗಿಯೂ ಇರುತ್ತದೆ. ಹೊಲದಲ್ಲಿ ನೆಟ್ಟ ಬಳಿಕ ಕೊಡಿಯು ಗಾಳಿಯ ಜೋರಿಗೆ ಬೊಡ್ಡೆಯಿಂದ ಬೇರೆಯಾಗಿ ಹೋಗಬಹುದು. ಆದುದರಿಂದ ಈ ಪದ್ಧತಿಯಿಂದ ಯಾರೂ ಹೆಚ್ಚಾಗಿ ಕೊಡಿ ಕಟ್ಟುವದಿಲ್ಲ.

**ಬಗಲ ಕೊಡಿ :—**ಹೊಲದಲ್ಲೇ ಬೆಳೆಯುವ ಹುಳಿ ಮಾವಿನ ಗಿಡದ ಬಗಲಲ್ಲಿ ಒಳ್ಳೇ ಜಾತಿಯ ಮರದ ಕೊಡಿಯನ್ನು ಕತ್ತರಿಸಿ ತಂದು ಸೇರಿಸಿ ಬೆಳೆಸುವದಕ್ಕೆ **ಬಗಲ ಕೊಡಿ** ಎಂಬ ಹೆಸರು. ಈ ಪದ್ಧತಿಯಲ್ಲಿ ಬೊಡ್ಡೆಯನ್ನು ಕೊಡಿಯ ಮರದ ಸಮೀಪ ಒಯ್ಯುವದಿಲ್ಲ. ಕೊಡಿಯನ್ನು ಬೊಡ್ಡೆಯಲ್ಲಿ ಸಿಗಿಸಿ ಕಟ್ಟುವ ಮೊದಲೇ ತಾಯಿ ಮರದಿಂದ ಕತ್ತರಿಸಿ ಬಿಡುತ್ತಾರೆ. ಆದ್ದರಿಂದ ಕೊಡಿಯ ಮರವು ಬೊಡ್ಡೆಯಿದ್ದ ಊರಿಂದ ಬಹು ದೂರದಲ್ಲಿದ್ದರೂ ಕೊಡಿಯನ್ನು ತಂದು ಅದಕ್ಕೆ ಕಟ್ಟಬಹುದು. ಆದರೆ ಈ ಪದ್ಧತಿಯಲ್ಲಿ ಪರಿಸ್ಥಿತಿಯು ನೆಟ್ಟಗಿದ್ದರೆ ನೂರಕ್ಕೆ ೧೦—೧೫ಕ್ಕಿಂತ ಹೆಚ್ಚು ಕೊಡಿಗಳು ಬದುಕುವದಿಲ್ಲ. ಆರ್ದ್ರ ಹವೆಯುಳ್ಳ ಸಮುದ್ರ ದಂಡೆಯ ಕೊಂಕಣ ಪಟ್ಟಿಯಲ್ಲೂ ಗೋವೆಯಲ್ಲೂ ಈ ರೀತಿಯಿಂದ ಕೊಡಿಗಳನ್ನು ಕಟ್ಟುತ್ತಾರೆ.

ಸುಮಾರು ಒಂದು ವರ್ಷದ ಹಿಂದೆ ಚಿಗುರಿ ಬೆಳೆದ ಕೊಡಿಯನ್ನು ಆರಿಸಬೇಕು. ಬೊಡ್ಡೆಯ ತೊಗಟೆಯಲ್ಲಿ ನೆಲದಿಂದ ಎರಡು ಮೊಳ ಎತ್ತರದ ಮೇಲೆ ಒಂದು ಇಂಚು ಉದ್ದವಾಗಿ ಅಡ್ಡ ಗೆರೆಯನ್ನು ಚೂರಿಯಿಂದ ತೆಗೆಯಬೇಕು. ಚೂರಿಯು ಒಳಗಿನ ಎಲುಬಿಗೆ ಹತ್ತಬಾರದು. ಈ ಗೆರೆಯ ಮೇಲ್ಭಾಗದಲ್ಲಿ ಒಂದು ಇಂಚು ಎತ್ತರವಾದ ತ್ರಿಕೋಣಾಕೃತಿಯ ತೊಗಟೆಯನ್ನು ಎಬ್ಬಿಸಬೇಕು. ಈ ಬಾಗದ ಎಲುಬು ಕಾಣ ಹತ್ತುವದು. ಬಳಿಕ ತೊಗಟೆಯಲ್ಲಿ ಅಡ್ಡ ಗೆರೆಯ

ನಡುವಿಂದ ಕೆಳಗಡೆಗೆ ಎರಡು ಇಂಚು ಉದ್ದವಾದ ನೆಟ್ಟನ್ನ ಗೆರೆಯೊಂದನ್ನು ತೆಗೆದು, ಈ ಗೆರೆಯು ಎರಡೂ ಬದಿಗಳನ್ನು ಏಳಿಸಬೇಕು. ಈ ಬದಿಗಳ ತೊಗಟೆಯನ್ನು ಏಳಿಸಲಿಕ್ಕೆ ಕೋಡಿನ ಇಲ್ಲವೆ ಬಿದುರಿನ ಮೊಂಡಾಗಿಯೂ ಚಪ್ಪಟೆಯಾಗಿಯೂ ಇರುವ ಬೆಣೆಯನ್ನು ಉಪಯೋಗಿಸುತ್ತಾರೆ. ಚೂರಿಯ ಎಲೆಯನ್ನು ಉಪಯೋಗಿಸಿದರೆ ತೊಗಟೆಗೂ ಒಳಗಿನ ಎಲುಬಿಗೂ ನೋವಾಗಿ ಕೊಡಿಗಳು ಬದುಕುವದಿಲ್ಲ. ಕೊಡಿಯ ಮೇಲಿನ ಎಲೆಗಳನ್ನೆಲ್ಲ ತೊಟ್ಟು ಮಾತ್ರ ಬಿಟ್ಟು ಮೊದಲೇ ಕತ್ತರಿಸಿಡುತ್ತಾರೆ. ಅದರ ಬುಡವನ್ನು ಲೆಕ್ಕಣಿಕೆಯಂತೆ ಕತ್ತರಿಸಿ ಬೊಡ್ಡೆಯ ಮೇಲೆ ತೆಗೆದ ನೆಟ್ಟನ್ನ ಗೆರೆಯಲ್ಲಿ ತೊಗಟೆಯೊಳಕ್ಕೆ ಒಳ ಮುಖವಾಗಿ ಸೇರಿಸುತ್ತಾರೆ ಮತ್ತು ಬೊಡ್ಡೆಯ ಮೇಲೆ ಹಿಂದೆ ತ್ರಿಕೋಣಾಕೃತಿಯಲ್ಲಿ ತೆಗೆದ ತೊಗಟೆಯನ್ನು ನಡುವೆ ಎರಡಾಗಿ ಕತ್ತರಿಸಿ, ಕೊಡಿಯ ಎರಡೂ ಬದಿಗಳಿಂದ ಅವನ್ನು ತಮ್ಮ ಮೊದಲಿನ ಸ್ಥಳದಲ್ಲೇ ಕೂಡ್ರಿಸಿ ತೆರೆದ ಎಲುಬನ್ನು ಮುಚ್ಚುತ್ತಾರೆ. ಬಳಿಕ ನೆಣಬಿನಿಂದಲೂ, ಅದರ ಮೇಲೆ ಕತ್ತದಿಂದಲೂ ಕೊಡಿಯನ್ನು ಬಿಗಿಯಾಗಿ ಕಟ್ಟಿ ಬಿಡುತ್ತಾರೆ. ಬೊಡ್ಡೆಯು ಗಡುತರವಿದ್ದರೆ ಎರಡು ಮೂರು ಕೊಡಿಗಳನ್ನು ಸಹ ಒಂದೇ ಬೊಡ್ಡೆಯ ಮೇಲೆ ಕಟ್ಟಬಹುದು.

ಕಟ್ಟುವ ಮೇಲೆ ಕೊಡಿಗಳು ಬಿಸಿಲಿಗೆ ಒಣಗದಂತೆ ಅವುಗಳ ಮೇಲೆ ದೊಡ್ಡದೊಂದು ಮಡಿಕೆಯನ್ನು ಕಿರುಪಿ ಹಾಕಿ ಆಗಲಿ, ತೆಂಗಿನ ಮುಂತಾದ ತಪ್ಪಲೆಯನ್ನು ಕಟ್ಟಿ ಆಗಲಿ ನೆರಳು ಮಾಡುತ್ತಾರೆ. ಎಂಟು ಹತ್ತು ದಿನಗಳಲ್ಲಿ ಕೊಡಿಯು ಒಣಗದಿದ್ದರೆ ಅದು ಬದುಕಬಹುದೆಂದು ತಿಳಿಯುತ್ತಾರೆ. ಒಂದೂವರೆ ತಿಂಗಳಲ್ಲಿ ಕೊಡಿಯ ಮೇಲಿನ ಕಣ್ಣುಗಳು ಚಿಗಿಯಲಾರಂಭಿಸುತ್ತವೆ. ಮುಂದೆ ಅವು ಚನ್ನಾಗಿ ಬೆಳೆದು ಒಂದೆರಡು ಫೂಟು ಉದ್ದವಾದ ಬಳಿಕ ನಂದಿನ ಮೇಲ್ಭಾಗಿಗೆ ಬೊಡ್ಡೆಯನ್ನು ಕಡಿದು ಹಾಕಿ, ಕೊಡಿಯು ಚನ್ನಾಗಿ ಬೆಳೆಯುವಂತೆ ಮಾಡುತ್ತಾರೆ. ಅದು ಬಲಿತ ಬಳಿಕ ಕತ್ತವನ್ನೆಲ್ಲ ಬಿಚ್ಚಿ ಹಾಕುತ್ತಾರೆ. ಘಟ್ಟದ ಮೇಲೆ ಈ ಪದ್ಧತಿಯಿಂದ ಹೆಚ್ಚಿನ ಯಶಸ್ಸು ದೊರೆತಿಲ್ಲ.

ಒಮ್ಮೆ ಕಟ್ಟಿದ ಕೊಡಿಗಳು ಬದುಕದಿದ್ದರೆ, ಮುಂದೆ ಅದೇ ಗಿಡಕ್ಕೆ ಮತ್ತೆ ಕೊಡಿಗಳನ್ನು ಕಟ್ಟಬಹುದು.

**ಬೊಡ್ಡೆ ಕೊಡಿ :—** ಈ ಪದ್ಧತಿಯಲ್ಲಿ ದೊಡ್ಡ ಮರಗಳನ್ನು ಸಹ ಕೊಡಿ ಕಟ್ಟಿ ಬದಲು ಮಾಡಬಹುದು. ಹುಳಿ ಹಣ್ಣಿನ ಹಳೇ ಮಾವಿನ ಮರಗಳಿಗೆ ಒಳ್ಳೇ ಜಾತಿಯ ಮಾವಿನ ಕೊಡಿಗಳನ್ನು ಕಟ್ಟಿ ಸುಧಾರಿಸುವದಕ್ಕೆ ಈ ಪದ್ಧತಿಯು ಬಹು ಯೋಗ್ಯವಾದದ್ದು. ಇದರಲ್ಲಿ ದೊಡ್ಡ ಮರಗಳನ್ನು ನೆಲದಿಂದ ೩—೪ ಫೂಟು ಎತ್ತರದಲ್ಲಿ ಕೊಡಿ ಕಟ್ಟುವ ಮೊದಲು ಕಡಿದು ಬಿಡುತ್ತಾರೆ. ಬಳಿಕ

ಉಳಿದ ಮೋಟಿಗೆ ಕೊಡಿ ಕಟ್ಟುತ್ತಾರೆ. ಆದ್ದರಿಂದಲೇ ಇದಕ್ಕೆ "ಬೊಡ್ಡೆ ಕೊಡಿ" ಎಂಬ ಹೆಸರು. ಒಂದೆರಡು ವರ್ಷದ ಗಿಡದಿಂದ ಬೇಕಾದಷ್ಟು ದೊಡ್ಡ ಮರವಿದ್ದರೂ ಅಡ್ಡಿಯಿಲ್ಲ ನೆಲದಿಂದ ೩—೪ ಫೂಟು ಎತ್ತರದಲ್ಲಿ ಮರದ ಬೊಡ್ಡೆಯನ್ನು ಕತ್ತಿಯಿಂದಾಗಲಿ ಕೊಡ್ಲಿಯಿಂದಾಗಲಿ ಕಡಿದು ಉಳಿದ ಮೋಟದ ತುದಿಯನ್ನು ಕರಗಸದಿಂದ ಸಪಾಟ ಮಾಡುತ್ತಾರೆ. ಮತ್ತು ಅದರ ತೊಗಟೆಯನ್ನು ಮೂರು ಇಂಚು ಉದ್ದವಾಗಿ ನೆಟ್ಟನೆ ಸೀಳುತ್ತಾರೆ. ಈ ಸೀಳಿನಗುಂಟ ಬಗಲ ಕೊಡಿಯಲ್ಲಿ ಮಾಡುವಂತೆ ತೊಗಟೆಯನ್ನು ಏಳಿಸಿ, ಲೆಕ್ಕಣಿಯಂತೆ ಕೆತ್ತಿ ತಯಾರಾದ ಕೊಡಿಯನ್ನು ಕೂಡ್ರಿಸಿ ಮೇಲಿಂದ ಕತ್ತದಿಂದ ಬಿಗಿಯುತ್ತಾರೆ. ಮೋಟವು ಗಡುತರವಾಗಿದ್ದರೆ ನಾಲ್ಕಾರು ಇಂಚಿಗೊಂದರಂತೆ ಆರೆಂಟು ಕೊಡಿಗಳನ್ನು ಸಹ ಒಂದೇ ಸಾರೆ ಒಂದೇ ಮೋಟಕ್ಕೆ ಕಟ್ಟಬಹುದು. ಕಟ್ಟಿದ ಬಳಿಕ ಕತ್ತದ ಮೇಲೂ ಮೋಟದ ತುದಿಗೆ ಗಾಯವಾದ ಭಾಗದ ಮೇಲೂ ಸಗಣೀ ಮಣ್ಣುಗಳ ಮಿಶ್ರಣವನ್ನು ಲೇಪಿಸುತ್ತಾರೆ. ಇದರಿಂದ ಮೋಟದೊಳಗಿನ ಹಸಿಯು ಆರಿ ಮೋಟವು ಒಣಗುವದಿಲ್ಲ. ಕಟ್ಟಿದ ಆರೆಂಟು ಕೊಡಿಗಳಲ್ಲಿ ಒಂದೆರಡು ಬದುಕಿದರೂ ಸಾಕು. ಬಗಲ ಕೊಡಿಯಲ್ಲಿ ಮಾಡುವಂತೆ ಬೊಡ್ಡೆ ಕೊಡಿಯಲ್ಲೂ ಕೊಡಿಗಳು ಒಣಗದಂತೆ ನೆರಳು ಮಾಡುವದು ಅವಶ್ಯವು. ಬೊಡ್ಡೆ ಕೊಡಿಯಲ್ಲಿ ನೂರಕ್ಕೆ ಎಂಟು ಹತ್ತರಂತೆ ಮಾತ್ರ ಕೊಡಿಗಳು ಬದುಕುತ್ತವೆ. ಘಟ್ಟದ ಮೇಲೂ ಈ ಪದ್ಧತಿಯು ಸಾಧ್ಯವಾಗಿದೆ.

ಬಗಲ ಕೊಡಿಯಲ್ಲಿ ಕೊಡಿಯು ಬದುಕುವ ಮೊದಲೇ ಮರವನ್ನು ಕಡಿಯುವದಿಲ್ಲ. ಆದ ಕಾರಣ, ಅನೇಕ ಸಾರೆ ಕೊಡಿಗಳು ಸತ್ತರೂ ಮತ್ತೂ ಪ್ರಯತ್ನವನ್ನು ಮಾಡಬಹುದು. ಬೊಡ್ಡೆ ಕೊಡಿಯಲ್ಲಿ ಹಾಗಲ್ಲ. ಮೊದಲೇ ಮರವನ್ನು ಕಡಿದು ಬಿಡುವದರಿಂದ ಮೋಟದ ತುದಿಯು ಒಣಗುತ್ತ ಹೋಗುತ್ತಗೆ ಒಂದು ಸಾರೆ ಕಟ್ಟಿದ ಕೊಡಿಗಳು ಬದುಕದಿದ್ದರೆ, ಮೋಟವನ್ನು ತುದಿಯಿಂದ ಸುಮಾರು ಒಂದು ಫೂಟು ಕೆಳಗೆ ಮತ್ತೊಮ್ಮೆ ಕಡಿದು, ಎರಡನೇ ಸಾರೆ ಕೊಡಿಗಳನ್ನು ಕಟ್ಟಬಹುದು. ಇವೂ ಬದುಕದಿದ್ದರೆ ಮೋಟವನ್ನು ಮೂರನೇ ಸಾರೆ ಕಡಿದು ಇನ್ನೊಮ್ಮೆ ಕೊಡಿಗಳನ್ನು ಕಟ್ಟಬಹುದು. ಇವು ಬದುಕದಿದ್ದರೆ, ಮುಂದೆ ಯತ್ನ ಮಾಡುವದು ಸಾಧ್ಯವಾಗಲಾರದು.

**ಬಾರು ಕೊಡಿ :**—ಬೊಡ್ಡೆಯು ಚೋರೆಯುಳ್ಳದ್ದಿರೂ, ಕೊಡಿಯ ಮರವು ಬಹು ದೂರ ಇದ್ದದ್ದಾದರೆ, ಬೊಡ್ಡೆಯನ್ನು ಅದರ ಸಮೀಪ ಒಯ್ಯುವದು ಸುಲಭವಲ್ಲ. ಆದ್ದರಿಂದ ಕೊಡಿಯನ್ನೇ ಆರಿಸಿ ಕೊಯ್ದು ತಂದು, ಅದರಷ್ಟೇ ಗಡುತರವಾದ ಬೊಡ್ಡೆಯ ಸಸಿಯನ್ನು ಆರಿಸಿ, ಬೊಡ್ಡೆಗೆ ಕೊಡಿಯನ್ನು ಕಟ್ಟು

ತ್ತಾರೆ. ಮೊದಲು ಚೋರೆಯಿಂದ ೮ ಇಂಚು ಎತ್ತರದ ಮೇಲೆ ಬೊಡ್ಡೆಯನ್ನು ಕತ್ತರಿಸಿ, ಹದನಾದ ಚೂರಿಯಿಂದ ಅದರ ತುದಿಯನ್ನು ಸುಮಾರು ಎರಡು ಇಂಚು ಉದ್ದವಾಗಿ ಲೆಕ್ಕಣಿಯಂತೆ ಮೇಲ್ಮುಖವಾಗಿ ಕೆತ್ತುತ್ತಾರೆ. ಕೂಡಲೆ ಕೊಡಿಯ ಬುಡವನ್ನು ಹಾಗೇ ಕೆಳಮುಖವಾಗಿ ಕೆತ್ತಿ, ಬೊಡ್ಡೆಯನ್ನು ಕೆತ್ತಿದಲ್ಲೇ ಕೊಡಿಯ ಬುಡವನ್ನು ಸರಿಯಾಗಿ ಕೂಡ್ರಿಸಿ, ಬಾಳೆ ಪಟ್ಟೆಯಿಂದ ಕಟ್ಟುತ್ತಾರೆ. ಅದರ ಮೇಲೆ ಸೆಣಬಿನಿಂದ ಬಿಗಿಯಾಗಿ ಕಟ್ಟಬೇಕು. ಕಟ್ಟುವಾಗ ಕೊಡಿಯ ಮೇಲಿನ ಎಲೆಗಳನ್ನೆಲ್ಲ ಕತ್ತರಿಸಿ ಬಿಡುತ್ತಾರೆ. ಕತ್ತರಿಸದಿದ್ದರೆ ಕೊಡಿಯು ಬೇಗ ಒಣಗುತ್ತದೆ. ಕೊಡಿಯೂ ಬೊಡ್ಡೆಯೂ ಒಣಗಬಾರದೆಂದು ಅವನ್ನು ಒದ್ದೆ ಅರಿವೆಯಿಂದ ಸುತ್ತಿ, ನೆರಳಿನಲ್ಲಿ ಅವುಗಳ ಮೇಲೆ ಮಣ್ಣಿನ ದೊಡ್ಡ ಪಾತ್ರೆಯನ್ನು ತಿರುವಿ ಹಾಕಿ ಮುಚ್ಚಿ ಇಡುತ್ತಾರೆ. ಪಾತ್ರೆಯೊಳಗಿನ ಹವೆಯನ್ನು ಎದಲಿಸುವಡಕ್ಕೆ ದಿನಕ್ಕೆ ಎರಡಾವರ್ತಿ ಪಾತ್ರೆಯನ್ನು ಎತ್ತಿ ತಿರುಗಿ ಹಾಗೇ ಇಡುತ್ತಾರೆ. ಸುಮಾರು ಹದಿನೈದು ದಿನಗಳಲ್ಲಿ ಕೊಡಿಯ ಮೇಲಿನ ಕಣ್ಣುಗಳು ಉಬ್ಬಿ, ಒಂದೂವರೆ ತಿಂಗಳಲ್ಲಿ ಚಿಗಿಯುತ್ತವೆ ಮುಂದೆ ಕೊಡಿಯು ಬಲಿತು ಬೆಳೆಯುವ ವರೆಗೆ ಚನ್ನಾಗಿ ಆರೈಕೆ ಮಾಡಬೇಕು. ಹೀಗೆ ಕಟ್ಟಿ ತಯಾರಾದ ಗಿಡದಲ್ಲಿ ಬೊಡ್ಡೆಯು ಬಾರುಕೋಲಿನ ಕೋಲಿನಂತೆಯೂ, ಕೊಡಿಯು ಬಾರಿನಂತೆಯೂ ಇರುವದರಿಂದ ಇದಕ್ಕೆ **ಬಾರು ಕೊಡಿ** ಎಂಬ ಹೆಸರು ಬಂದಿದೆ. ಇದರಲ್ಲಿ ನೂರಕ್ಕೆ ನಾಲ್ವೈದಕ್ಕಿಂತ ಹೆಚ್ಚು ಕೊಡಿಗಳು ಬದುಕುವದಿಲ್ಲ,

**ತಲೆ ಕೊಡಿ :—** ಹಳೇ ಮರಗಳ ದೊಡ್ಡ ದೊಡ್ಡ ಟೊಂಗೆಗಳನ್ನು ಕಡಿದು, ಅವುಗಳಿಂದ ಬರುವ ಹೊಸ ಚಿಗುರುಗಳು ಬಲಿತ ಬಳಿಕ, ಚೋರೆಗಳಲ್ಲಿ ತಯಾರಿಸಿದ ಭೆಟ್ಟಿ ಕೊಡಿಯ ಗಿಡಗಳನ್ನು ಅವುಗಳ ಸಮೀಪ ಒಯ್ಯು ಎತ್ತರದ ಮೇಲೆ ತೂಗ ಹಾಕಿ, ಆ ಚಿಗುರುಗಳಿಗೆ ಚೋರೆಯ ಗಿಡಗಳ ಕೊಡಿಗಳನ್ನು ಭೆಟ್ಟಿ ಕೊಡಿಯ ಪದ್ಧತಿಯಿಂದ ಜೋಡಿಸುತ್ತಾರೆ. ಮುಂದೆ ಚಿಗುರಿನ ತುದಿಯನ್ನೂ ಕೊಡಿಯ ಬುಡವನ್ನೂ ಕತ್ತರಿಸಿ ಬಿಡುತ್ತಾರೆ. ಹೀಗೆ ಚಿಗುರಿನ ಮೇಲೆ ಕೊಡಿಯು ಬೆಳೆಯುತ್ತದೆ. ಒಂದೇ ಮರದ ಬೇರೆ ಬೇರೆ ಟೊಂಗೆಗಳ ಮೇಲೆ ಮೂವತ್ತು ನಾಲ್ವತ್ತು ಕೊಡಿಗಳನ್ನು ಕಟ್ಟುತ್ತಾರೆ ಅವು ಬೆಳೆಯಲಾರಂಭಿಸಿದ ಬಳಿಕ, ಹಳೇ ಮರದ ಟೊಂಗೆಗಳನ್ನೂ ಚಿಗುರುಗಳನ್ನೂ ಆಗಾಗ ಕಡಿದು ಹಾಕಿ, ಕೊಡಿಗಳು ಮಾತ್ರ ಬೆಳೆಯುತ್ತಿರುವಂತೆ ಮಾಡುತ್ತಾರೆ. ಹೀಗೆ ಕೊಡಿ ಕಟ್ಟಿದ ಮರಗಳು ಮೂರು ನಾಲ್ಕು ವರ್ಷಗಳ ಕಾಲದಲ್ಲಿ ವಿಸ್ತಾರ ಹೊಂದಿ ದೊಡ್ಡ ಮರಗಳಂತೆ ಕಾಣಿಸುತ್ತವೆ. ಫಲವೂ ಚನ್ನಾಗಿ ಬರುತ್ತದೆ. ಈ ಪದ್ಧತಿಗೆ **ತಲೆ ಕೊಡಿ** ಎಂಬ ಹೆಸರು. ಇದರಿಂದ ಕೊಡಿ ಕಟ್ಟಿದ ದೊಡ್ಡ ಆಕಾರದ ಮರ

ಗಳನ್ನು ಅಲ್ಪ ಕಾಲದಲ್ಲಿ ಪಡೆಯಬಹುದು. ಆದರೆ ಒಂದೊಂದು ಮರಕ್ಕೆ ಮೂವತ್ತು, ನಾಲ್ವತ್ತು ಚೋರೆಗಳಲ್ಲಿ ತಯಾರಿಸಿದ ಕೊಡಿಯ ಗಿಡಗಳು ಬೇಕಾಗುತ್ತವೆ. ಅವುಗಳನ್ನು ಎತ್ತರದ ಮೇಲೆ ತೂಗ ಹಾಕುವದೂ, ಅಲ್ಲಿ ಕೊಡಿಗಳು ಬದುಕುವ ವರೆಗೆ ಎರಡು ಮೂರು ತಿಂಗಳು ನೀರು ಹಾಕುವದೂ ಬಹಳ ಖರ್ಚಿನದು. ಒಂದು ಮರವನ್ನು ಹೀಗೆ ತಯಾರಿಸಲು ಏನಿಲ್ಲೆಂದರೂ ಮೂವತ್ತು ರೂಪಾಯಿಗಳು ಬೇಕು. ಇದರ ಬದಲು ಚೋರೆಯ ಗಿಡವನ್ನೇ ತಂದು ಹೊಸದಾಗಿ ನೆಟ್ಟು ಬೆಳೆಸಿದರೆ ನಾಲ್ಕೈದು ವರ್ಷಗಳಲ್ಲಿ ಫಲಕ್ಕೆ ಬರುತ್ತದೆ. ಮತ್ತು ಹಳೇ ಮರವನ್ನು ಕಡಿದರೆ ಇಮಾರತಿನ ಕಟ್ಟಿಗೆಯೂ ಉರುವಲವೂ ದೊರೆತು ಲಾಭವಾಗುತ್ತದೆ.

ಇವಿಷ್ಟು ಮುಖ್ಯವಾಗಿ ಕೊಡಿ ಕಟ್ಟುವ ವಿಧಗಳು. ಇವಲ್ಲದೆ ಜೀನು ಕೊಡಿ, ಸೀಳು ಕೊಡಿ, ಬೆಣೆ ಕೊಡಿ ಮುಂತಾದ ಅನೇಕ ವಿಧಗಳುಂಟು. ಅವನ್ನು ಈ ನಾಡಿನಲ್ಲಿ ಯಾರೂ ಅನುಸರಿಸುವದಿಲ್ಲ. ಮೇಲೆ ವಿವರಿಸಿದ ಪದ್ಧತಿಗಳನ್ನು ಚನ್ನಾಗಿ ಅರಿತುಕೊಂಡರೆ ಕೊಡಿ ಕಟ್ಟುವ ಕೆಲಸವು ಸುಗಳಿತವಾಗಿ ಸಾಗುವದು. ಆದ್ದರಿಂದ ಉಳಿದವುಗಳನ್ನು ಇಲ್ಲಿ ವರ್ಣಿಸಿರುವದಿಲ್ಲ.

**ಕಣ್ಣು ಹಚ್ಚುವದು :—** ಕೊಡಿ ಕಟ್ಟುವದರಲ್ಲಿರುವ ಕೆಲವು ಅಡಚಣಿಗಳನ್ನು ದೂರ ಪಡಿಸಿ, ಕೆಲಸವು ಸುಲಭವೂ ಕಡಿಮೆ ಖರ್ಚಿನದೂ ಶ್ರಮದ್ದೂ ಆಗಬೇಕೆಂದು ಕಣ್ಣು ಹಚ್ಚುವ ಪದ್ಧತಿಯನ್ನು ಹುಡುಕಿ ತೆಗೆದಿದ್ದಾರೆ. ಇದರಲ್ಲೂ ಕೊಡಿ ಕಟ್ಟುವದರಲ್ಲಿ ಅನುಸರಿಸಬೇಕಾದ ಮುಖ್ಯ ತತ್ವಗಳನ್ನು ಅನುಸರಿಸಲೇ ಬೇಕು. ಕಣ್ಣು ಹಚ್ಚಿ ಗಿಡಗಳನ್ನು ಬೆಳೆಸುವದಾದರೂ ಎರಡು ಬೇರೆ ಬೇರೆ ಗಿಡಗಳ ಅಥವಾ ಮರಗಳ ಭಾಗಗಳನ್ನು ಒಂದಕ್ಕೊಂದು ಜೋಡಿಸಿ ಹೊಸದೊಂದು ಗಿಡವನ್ನು ತಯಾರಿಸುವದಿರುತ್ತದೆ. ಎರಡೂ ಗಿಡಗಳಲ್ಲಿ ಬಂಧುತ್ವವಿರಬೇಕು. ಕಾಷ್ಠಜನಕ ಥರವು ವರ್ತುಳಾಕಾರದಲ್ಲಿರಬೇಕು. ಅವೆರಡೂ ರಸವತ್ತಾಗಿರಬೇಕು.

(೧) ಕಣ್ಣು ಹಚ್ಚುವದರಲ್ಲಿ ಬೊಡ್ಡೆಯ ಮೇಲೆ ಜೋಡಿಸಲಿಕ್ಕೆ ಕೊಡಿಯ ಇಡೀ ಟೊಂಗೆಯನ್ನು ಉಪಯೋಗಿಸುವ ಬದಲು, ಆ ಟೊಂಗೆಯ ಮೇಲೆ ಚನ್ನಾಗಿ ಉಬ್ಬಿದ ಒಂದು ಕಣ್ಣನ್ನು (ಮೊಗ್ಗೆಯನ್ನು) ಮಾತ್ರ ಉಪಯೋಗಿಸಿದರಾಯಿತು. ಟೊಂಗೆಯ ಮೇಲೆ ಎಷ್ಟು ಕಣ್ಣುಗಳು ಇರುತ್ತವೋ ಅಷ್ಟು ಗಿಡಗಳನ್ನು ತಯಾರಿಸಬಹುದು.

(೨) ಕಣ್ಣು ಹಚ್ಚುವದಕ್ಕೆ ಬೊಡ್ಡೆಯ ಗಿಡಗಳನ್ನು ನೆಲದಲ್ಲಿ ನೆಟ್ಟು ಬೆಳೆಸಿಕೊಳ್ಳಬಹುದು. ಚೋರೆಗಳಲ್ಲಿ ನೆಟ್ಟು ಬೆಳೆಸುವ ಅವಶ್ಯವಿಲ್ಲ. ಯಾಕಂದರೆ, ಬೊಡ್ಡೆಯನ್ನು ಕೊಡಿಯ ಮರವಿದ್ದಲ್ಲಿಗೆ ಒಯ್ಯಬೇಕಾಗುವದಿಲ್ಲ.

(೩) ಕೊಡಿಯು ಮರವು ಬಹು ದೂರದಲ್ಲಿದ್ದರೂ ಕಣ್ಣುಳ್ಳ ಟೊಂಗೆಗಳನ್ನು ಪೋಸ್ಟಿನಿಂದ ತರಿಸಿ ಎಷ್ಟೋ ಗಿಡಗಳನ್ನು ತಯಾರಿಸಿಕೊಳ್ಳಬಹುದು

(೪) ಕಣ್ಣು ಹಚ್ಚುವದನ್ನು ಅಲ್ಪ ಕಾಲದಲ್ಲಿ, ಅಲ್ಪ ಶ್ರಮದಿಂದ ಮಾಡಬಹುದು. ಕೊಡಿ ಕಟ್ಟುವದಕ್ಕೆ ಹೆಚ್ಚು ಕಾಲವೂ ಶ್ರಮವೂ ಬೇಕು.

(೫) ಕಣ್ಣು ಹಚ್ಚಿದ ಬಳಿಕ ಅವು ಚಿಗಿತು ಬೆಳೆಯುವ ವರೆಗೆ ಬೊಡ್ಡೆಗಳಿಗಾಗಲಿ, ಕಣ್ಣಿನ ಭಾಗಕ್ಕಾಗಲಿ ಹೆಚ್ಚಿನದೇನೂ ಮಾಡಬೇಕಾಗಿಲ್ಲ. ಕೊಡಿ ಕಟ್ಟಿದರೆ ಅದನ್ನು ಕತ್ತರಿಸುವ ಕೆಲಸವನ್ನು ಆಯಾ ಕಾಲಕ್ಕೆ ಎಚ್ಚರದಿಂದ ಮಾಡಬೇಕಾಗುತ್ತದೆ.

(೬) ಕೊಡಿ ಕಟ್ಟುವದಕ್ಕಿಂತ ಕಣ್ಣು ಹಚ್ಚಿದರೆ ಗಿಡಗಳು ಅಗ್ಗವಾಗಿ ದೊರೆಯುತ್ತವೆ.

ಇವೇ ಕಣ್ಣು ಹಚ್ಚುವದರಿಂದಾಗುವ ಮುಖ್ಯ ಲಾಭಗಳು.

ಕಣ್ಣು ಹಚ್ಚುವದನ್ನು ಬೊಡ್ಡೆ ಮತ್ತು ಕೊಡಿಯ ಗಿಡಗಳು ರಸವತ್ತಾಗಿರುವಾಗ ವರ್ಷದ ಯಾವ ಋತುವಿನಲ್ಲಾದರೂ ಮಾಡಬಹುದು. ಗಿಡಗಳು ಚಿಗುರುವ ಪೂರ್ವದಲ್ಲಿ ಅಂದರೆ ಚಿಗುರಲಿಕ್ಕೆ ಪ್ರಾರಂಭವಾಗುವ ಸಮಯದಲ್ಲಿ ಕಣ್ಣು ಹಚ್ಚಿದರೆ, ಅದು ಬೇಗ ಅಂಟಿಕೊಂಡು ಚಿಗುರುತ್ತದೆ. ಬಹಳ ಮಳೆಯಾಗುವಾಗ ಕಣ್ಣು ಸೇರಿಸಿದ ಭಾಗದಲ್ಲಿ ಬೊಡ್ಡೆಯ ತೊಗಟೆಯೊಳಗೆ ನೀರು ಹೋಗಿ ಕಣ್ಣು ಕೊಳೆಯುತ್ತದೆ. ಕಣ್ಣು ಹಚ್ಚುವಾಗಲೂ, ಹಚ್ಚಿದ ಬಳಿಕ ಎಂಟು ಹತ್ತು ದಿನಗಳ ವರೆಗೂ ಮಳೆಯಾಗದಿದ್ದರೆ ಒಳ್ಳೇದು. ಚಳಿಗಾಲದಲ್ಲಿ ಸಾಮಾನ್ಯವಾಗಿ ಯಾವ ಗಿಡ ಮರಗಳೂ ಬೆಳೆಯುತ್ತಿರುವದಿಲ್ಲ. ಆದ್ದರಿಂದ ಈ ಋತುವಿನಲ್ಲಿ ಹಚ್ಚಿದ ಕಣ್ಣುಗಳು ಚಿಗಿಯಲಿಕ್ಕೆ ಬಹಳ ದಿನಗಳು ಬೇಕಾಗುತ್ತವೆ ಚಳಿಗಾಲದ ಪ್ರಾರಂಭದಲ್ಲಿ ಹಚ್ಚಿದ ಕಣ್ಣುಗಳು ಚಿಗಿಯದೆ ಹಾಗೇ ಇದ್ದು ಮುಂದಿನ ವಸಂತ ಕಾಲದಲ್ಲಿ ಚಿಗಿತು ಬರುವದುಂಟು.

ಬೊಡ್ಡೆಯ ಗಿಡಗಳೂ ಕಣ್ಣಿನ ಟೊಂಗೆಗಳೂ ರಸವತ್ತಾಗಿವೆಯೋ ಇಲ್ಲವೋ ಎಂಬದನ್ನು ತಿಳಿದುಕೊಳ್ಳಲು ಸುಲಭವಾದ ಒಂದು ರೀತಿಯುಂಟು, ಅದು ಯಾವದೆಂದರೆ, ಟೊಂಗೆಯ ತೊಗಟೆಯನ್ನು ಉಗುರಿನಿಂದ ಚಿವುಟಿ ಏಳಿಸಿ ಎಳೆದರೆ ರಸವತ್ತಾಗಿರುವ ಗಿಡದ ತೊಗಟೆಯು ಹರಿಯುವದಿಲ್ಲ. ಸುಲಭವಾಗಿ ಉದ್ದಕ್ಕೆ ಏಳುವದು. ಒಳಗಿನ ಎಲುಬು ಒಗ್ಗೆಯಾಗಿರುವದು. ರಸವತ್ತಾಗಿರದ ಗಿಡದ ತೊಗಟೆಯು ಏಳುವದಿಲ್ಲ. ಹರಿಯುವದು. ಸಾಮಾನ್ಯವಾಗಿ ಹೊಸ ಚಿಗುರುಗಳಿಂದ ಶೋಭಿಸುತ್ತಿರುವ ಗಿಡಗಳು ರಸವತ್ತಾಗಿರುತ್ತವೆ. ರಸ

ವಿಲ್ಲದ ಬೊಡ್ಡೆಗಳ ಬುಡವನ್ನು ಕೆದರಿ ತುಸು ಗೊಬ್ಬರ ಹಾಕಿ, ನೀರು ಹಾಯಿಸಿದರೆ, ಹತ್ತು ಹದಿನೈದು ದಿನಗಳಲ್ಲಿ ಅವು ಚಿಗುರ ಹತ್ತುವವು. ರಸವತ್ತಾಗುವವು. ಆಗ ಅವುಗಳ ಮೇಲೆ ಕಣ್ಣು ಹಚ್ಚಬಹುದು.

ಬೊಡ್ಡೆಯ ಗಿಡಗಳನ್ನು ಮಡಿಗಳಲ್ಲಿ ಬೀಜ ಬಿತ್ತಿ ತಯಾರಿಸಿಕೊಳ್ಳುತ್ತಾರೆ ಸಸಿಗಳು ಒಂದು ವರ್ಷದಲ್ಲಿ ಕಣ್ಣು ಹಚ್ಚಲಿಕ್ಕೆ ತಯಾರಾಗುತ್ತವೆ. ಸಸಿಗಳು ಆದಷ್ಟು ಒಂದಕ್ಕೊಂದರ ಸಮೀಪವಿರಬೇಕು ಇಲ್ಲವಾದರೆ, ಅವುಗಳಿಗೆ ಅಡ್ಡ ಟೊಂಗೆಗಳು ಬಹಳ ಮೂಡಿ, ನಡುವಿನ ಬೊಡ್ಡೆಯು ನೀಟಾದದ್ದೂ ಬಲಿಷ್ಠವಾದದ್ದೂ ಇರುವದಿಲ್ಲ ಬೊಡ್ಡೆಯ ಸಸಿಗಳ ಮೇಲೆ ಮೂಡುವ ಅಡ್ಡ ಟೊಂಗೆಗಳನ್ನು ಸಣ್ಣವಿರುವಾಗಲೇ ಚಿವುಟಿ ಹಾಕಬೇಕು. ಬೊಡ್ಡೆಯ ಮೇಲೆ ಕಣ್ಣು ಹಚ್ಚುವ ಭಾಗವು ಹಚ್ಚಗಿರಬೇಕು ಸಾಧಾರಣ ಬಲಿತಿರಬೇಕು. ಬಹಳ ಬಲಿತಿದ್ದರೆ, ತೊಗಟೆಯು ಏಳುವದಿಲ್ಲ. ತೀರ ಎಳೆತಿದ್ದರೂ ಬರುವದಿಲ್ಲ.

ಕಣ್ಣುಗಳನ್ನು ಆರಿಸುವದು ಮಹತ್ವದ್ದಾಗಿರುತ್ತದೆ. ಅವು ಎಲೆಗಳ ಒಗಲಲ್ಲಿ ಇರುತ್ತವೆ. ಒಳ್ಳೇ ಜಾತಿಯ ಮರಗಳ ಟೊಂಗೆಗಳ ಮೇಲಿನ ಕಣ್ಣುಗಳನ್ನು ಹಚ್ಚಲಿಕ್ಕೆ ಉಪಯೋಗಿಸುತ್ತಾರೆ. ಈ ಟೊಂಗೆಗಳು ಒಂದೆರಡು ಋತುಗಳ ಹಿಂದೆ ಚಿಗಿತವಿರಬೇಕು. ಅವು ಹಚ್ಚಗಿರಬೇಕು. ಅವುಗಳ ಮೇಲೆ ಅಲ್ಲಲ್ಲಿ ಬೂದಿ ಅಥವಾ ಕೆಂದು ಬಣ್ಣದ ಗೆರೆಗಳು ಮೂಡಿರಬೇಕು. ಈ ಗೆರೆಗಳಿಂದ ಟೊಂಗೆಯು ಮಧ್ಯಮ ಬೆಳವಣಿಗೆಯದಿರುತ್ತದೆಂದು ತಿಳಿದು ಬರುವದು. ಈ ಗೆರೆಗಳೇ ಇಲ್ಲದಿದ್ದರೆ ಟೊಂಗೆಯು ಬಹಳ ಎಳೆತೆಂದೂ, ಗೆರೆಗಳು ಟೊಂಗೆಯನ್ನೆಲ್ಲ ಮುಚ್ಚಿದರೆ ಅದು ಬಹಳ ಬೆಳೆದದ್ದೆಂದೂ ತಿಳಿಯುತಕ್ಕದ್ದು. ಇವೆರಡೂ ತರದ ಟೊಂಗೆಗಳ ಮೇಲಿನ ಕಣ್ಣುಗಳು ಚಿಗಿಯಲಿಕ್ಕಿಲ್ಲ ಮಧ್ಯಮ ಬೆಳವಣಿಗೆಯ ಟೊಂಗೆಯು ಉರುಟಾಗಿದ್ದು ಅದರ ಮೇಲಿನ ಕಣ್ಣುಗಳು ಚಿಗಿಯಲಿಕ್ಕೆ ಬಹಳ ಒಳ್ಳೆಯವು ಅವು ಉಬ್ಬಿರುತ್ತವೆ. ಒಡೆದಿರುವದಿಲ್ಲ. ಒಡೆದ ಅಥವಾ ಚಿಗಿತ ಕಣ್ಣುಗಳು ಹಚ್ಚಲಿಕ್ಕೆ ಯೋಗ್ಯವಲ್ಲ. ಕಣ್ಣುಗಳು ಉಬ್ಬದಿದ್ದರೆ, ಟೊಂಗೆಯ ತುದಿಯ ಎಳೆ ಭಾಗವನ್ನು ಕತ್ತರಿಸಿ ಚಲ್ಲಬೇಕು. ಮುಂದೆ ಹತ್ತು ಹದಿನೈದು ದಿನಗಳಲ್ಲಿ ಕತ್ತರಿಸಿ ಬಿಟ್ಟ ಮೋಟು ಟೊಂಗೆಯ ಮೇಲಿನ ಕಣ್ಣುಗಳು ಉಬ್ಬಿದ್ದು ಕಂಡು ಬರುವದು. ಆಗ ಅವುಗಳನ್ನು ತೆಗೆದು ಬೊಡ್ಡೆಗಳ ಮೇಲೆ ಹಚ್ಚಬಹುದು.

ಕಣ್ಣು ಹಚ್ಚುವ ಕೆಲಸಕ್ಕೆ ಅನುಕೂಲವಾದದ್ದೊಂದು ಚೂರಿಯಿರುತ್ತದೆ. ಅದಕ್ಕೆ **ಕಣ್ಣು ಹಚ್ಚುವ ಚೂರಿ** ಯೆನ್ನುತ್ತಾರೆ. ಅದರ ಎಲೆಯು ಸಪೂರಾಗಿದ್ದು ಧಾರೆಯು ಬಹಳ ಹದನಾಗಿರುತ್ತದೆ. ಹಿಡಿಕೆಯು ಕೋಡಿನದಾಗಲಿ, ಎಲುಬಿನದಾಗಲಿ ಇರುತ್ತದೆ. ಹಿಡಿಕೆಯ ಬುಡವು ಚಪ್ಪಟೆಯಾಗಿರುತ್ತದೆ. ಈ

ಚಪ್ಪಟೆಯಾದ ಬುಡದಿಂದ ಗಿಡಗಳ ತೊಗಟೆಯನ್ನು ನೋವಾಗದಂತೆ ಎಳಿಸುವದು ಸುಲಭ. ಎಲೆಯು ಧಾರೆಯು ಹದವಾದ್ದರಿಂದ, ಟೊಂಗೆಯ ಮೇಲಿನ ಕಣ್ಣುಗಳನ್ನು ಎಳಿಸುವದೂ, ತೊಗಟೆಯನ್ನು ಸೀಳುವದೂ ನೆಟಿಯಾಗಿ ಆಗುತ್ತದೆ. ಆದ್ದರಿಂದ ಕಣ್ಣು ಹಚ್ಚುವಾಗ ಈ ತರದ ಚೂರಿಯನ್ನೇ ಉಪಯೋಗಿಸುವದು ಉತ್ತಮ

ಹೀಗೆ ಬೊಡ್ಡೆಗಳನ್ನೂ ಕಣ್ಣುಗಳನ್ನೂ ಸಿದ್ಧ ಪಡಿಸಿಕೊಂಡ ಬಳಿಕ, ಕಣ್ಣುಗಳನ್ನು ಹ್ಯಾಗೆ ಹಚ್ಚಬೇಕೆಂಬದನ್ನು ನೋಡುವ.

**(೧) ಢಾಲು ಕಣ್ಣು :—** ಈ ಪದ್ಧತಿಯು ಈ ಮೊದಲೇ ಹೇಳಿದ ಕಣ್ಣು ಹಚ್ಚುವ ಮೂರು ಪದ್ಧತಿಗಳಲ್ಲಿ ಒಂದು ಇದನ್ನೇ ಈ ದೇಶದಲ್ಲಿ ಜನರು ಸಾಮಾನ್ಯವಾಗಿ ಅನುಸರಿಸುತ್ತಾರೆ. ಟೊಂಗೆಯ ಮೇಲಿನ ಕಣ್ಣನ್ನು ಹಚ್ಚಲಿಕ್ಕೆ ಎಳಿಸಿ ತೆಗೆದ ಬಳಿಕ ಅದರ ಆಕಾರವು ಢಾಲಿನಂತೆ ಕಾಣುವದರಿಂದ ಈ ಪದ್ಧತಿಗೆ ಢಾಲು ಕಣ್ಣಿನ ಪದ್ಧತಿ ಎಂಬ ಹೆಸರು

ಒಳ್ಳೇ ಜಾತಿಯ ಕಣ್ಣಿನ ಟೊಂಗೆಯನ್ನು ಆರಿಸಿ ತಂದು ಅದರ ಮೇಲಿನ ಎಲೆಗಳನ್ನೆಲ್ಲ ಸುಮಾರು ಅರ್ಧ ಇಂಚು ತೊಟ್ಟು ಬಿಟ್ಟು ಕತ್ತರಿಸಿ ಚಲ್ಲಬೇಕು. ಬಳಿಕ ಚೂರಿಯಿಂದ ಟೊಂಗೆಯ ಮೇಲಿನ ಉಬ್ಬಿದ ಕಣ್ಣನ್ನು ಎಳಿಸಿ ತೆಗೆಯಬೇಕು. ಕಣ್ಣಿನ ಸಂಗಡ ಮೇಲ್ಬದಿಗೆ ಅರ್ಧ ಇಂಚು, ಕೆಳಬದಿಗೆ ಅರ್ಧ ಇಂಚು, ಎಡಬಲಗಳಲ್ಲಿ ಕಾಲು ಇಂಚು ಹೀಗೆ ತೊಗಟೆಯಿರಬೇಕು ಈ ಭಾಗವನ್ನು ಚೂರಿಯಿಂದ ಕೆತ್ತಿ ತೆಗೆದರೆ ಅದರ ಕೆಳಗೆ ತುಸು ಎಲುಬಿನ ಭಾಗವೂ ಬರುವದು. ಇದನ್ನು ಉಗುರಿನಿಂದ ಸಾವಕಾಶವಾಗಿ ತೊಗಟೆಯಿಂದ ಎಳಿಸಿ ಚಲ್ಲಬೇಕು ಹೀಗೆ ಎಳಿಸುವಾಗ ತೊಗಟೆಯಲ್ಲಿ ತೂತು ಬೀಳಬಾರದು ತೂತು ಬಿದ್ದರೆ ಅದರಲ್ಲಿದ್ದ ಕಣ್ಣು ಹಾಳಾಗಿ ಅದು ಉಪಯೋಗವಿಲ್ಲದಂತಾಗುತ್ತದೆ. ಈ ಸಂಗತಿಯು ಮಹತ್ವದ್ದು. ಕಣ್ಣು ಹಾಳಾಗದಂತೆ ಎಲುಬನ್ನು ಎಳಿಸುವದಕ್ಕೆ ಒಳ್ಳೇ ಅಭ್ಯಾಸ ಬೇಕು. ಹೀಗೆ ತೆಗೆದುಕೊಂಡ ಕಣ್ಣನ್ನು ಒಣಗಬಾರದೆಂದು ನೀರಿನಲ್ಲಾಗಲಿ, ಬಾಯಲ್ಲಾಗಲಿ ಇಟ್ಟುಕೊಂಡು, ಬೊಡ್ಡೆಯ ಮೇಲೆ ತೊಗಟೆಯನ್ನು ಎಳಿಸುತ್ತಾರೆ. ಬೊಡ್ಡೆಯ ಮೇಲೆ ನೆಲದಿಂದ ಸುಮಾರು ಒಂದು ಫೂಟು ಎತ್ತರದಲ್ಲಿ ಅನುಕೂಲವಾದ ಸ್ಥಳವನ್ನು ನೋಡಿ, ಅಲ್ಲಿ ಸುಮಾರು ಆರೆಂಟು ಇಂಚುಗಳ ವರೆಗೆ ಎಲೆ ಮುಳ್ಳು, ಅಡ್ಡ ಟೊಂಗೆ ಮುಂತಾದವುಗಳನ್ನು ಎಚ್ಚರದಿಂದ ನಡುವಿನ ಬೊಡ್ಡೆಗೆ ಪೆಟ್ಟಾಗದಂತೆ ಕತ್ತರಿಸಿ ಚಲ್ಲುತ್ತಾರೆ ಇದರಿಂದ ಕಣ್ಣು ಹಚ್ಚುವದಕ್ಕೆ ಅನುಕೂಲವಾಗುತ್ತದೆ. ಬಳಿಕ ಬೊಡ್ಡೆಯ ತೊಗಟೆಯನ್ನು ಎರಡು ಇಂಚು




ಆಕೃತಿ ೫. ಢಾಲು ಕಣ್ಣಿನ ಪದ್ಧತಿ.

ಅ. ಕಣ್ಣು ಹಚ್ಚಲಿಕ್ಕೆಂದು ತಂದ ಕಡ್ಡಿಯು ಕಡ್ಡಿಯು ದುಂಡಗಿದ್ದದ್ದನ್ನೂ ಕಣ್ಣುಗಳು ಉಬ್ಬಿದ್ದನ್ನೂ ನೋಡಿರಿ.

ಬ. ಹಚ್ಚಲಿಕ್ಕೆ ಸಿದ್ಧವಾದ ಕಣ್ಣು

ಕ. ಬೊಡ್ಡೆಯ ಮೇಲೆ "⊥" ಹೀಗೆ ತೊಗಟೆಯನ್ನು ಸೀಳಿದೆ.

ಡ. ಬೊಡ್ಡೆಯ ಮೇಲೆ ತೊಗಟೆಯ ಸೀಳಿನ ಒಳಗೆ ಕಣ್ಣು ಸೇರಿಸಲ್ಪಟ್ಟಿದೆ.

ಇ. ಕಣ್ಣು ಹಚ್ಚಿ ಬೊಡ್ಡೆಯನ್ನು ಕಟ್ಟಲಾಗಿದೆ.

[ ಪಾನು ೬೮.

ಉದ್ದವಾಗಿ ನೆಟ್ಟಗೆ ಚೂರಿಯಿಂದ ಸೀಳುತ್ತಾರೆ. ಸೀಳಿನ ಕೆಳ ತುದಿಗೆ ಹತ್ತಿ ಅರ್ಧ ಇಂಚು ಉದ್ದವಾಗಿ ಅಡ್ಡ ಸೀಳುತ್ತಾರೆ. ಹೀಗೆ ಮಾಡಿದ ಸೀಳುಗಳೆರಡೂ ಕೂಡಿ " ⊥ " ಹೀಗೆ ಕಾಣುತ್ತವೆ. ಬಳಿಕ ಈ ಸೀಳುಗಳು ಒಂದಕ್ಕೊಂದು ಕೂಡುವಲ್ಲಿ ಚೂರಿಯ ಹಿಡಿಕೆಯ ಬುಡವನ್ನು ಹಾಕಿ ತೊಗಟೆಯ ಎರಡೂ ಪದರುಗಳನ್ನು ಏಳಿಸುತ್ತಾರೆ. ಮತ್ತು ಮೊದಲೇ ತೆಗೆದು ಬಾಯಲ್ಲಿಟ್ಟುಕೊಂಡಿದ್ದ ಕಣ್ಣನ್ನು ಮೇಲ್ಮುಖ ಮಾಡಿ ಈ ಪದರುಗಳೊಳಕ್ಕೆ ಸೇರಿಸುತ್ತಾರೆ. ಕಣ್ಣು ಬೊಡ್ಡೆಯ ಎಲುಬಿನ ಮೇಲೆ ಚೆನ್ನಾಗಿ ಅಂಟಿಕೊಂಡು ಕೂಡ್ರುವಂತೆ ಎಚ್ಚರವಡ ಬೇಕು. ಹೀಗೆ ಕೂತ ಬಳಿಕ ಅದರ ಮೇಲೆ ಬೊಡ್ಡೆಯ ತೊಗಟೆಯ ಪದರುಗಳೆರಡೂ ಬರುತ್ತವೆ. ಕಣ್ಣಿನ ಮುಖವು ಮಾತ್ರ ಅದರ ಮೇಲಿನ ಎಲೆಯ ದಂಟಿನ ಸಹಿತ ಹೊರಗೆ ಕಾಣುತ್ತಿರಬೇಕು ಇದಾದ ಮೇಲೆ ಸಪೂರಾದ ಬಾಳೆ ಪಟ್ಟೆಯಿಂದ ಕಣ್ಣಿನ ಮುಖದ ಮೇಲ್ಬದಿಗೂ ಕೆಳಬದಿಗೂ ಸುತ್ತಿ ಬಿಗಿಯಾಗಿ ಕಟ್ಟ ಬೇಕು ಕಣ್ಣು ಬಿಸಿಲಿನಿಂದ ಒಣಗಬಾರದೆಂದು ಅದನ್ನು ಉತ್ತರ ದಿಕ್ಕಿಗೆ ಮುಖವಾಗಿ ಬೊಡ್ಡೆಯಲ್ಲಿ ಹಚ್ಚಬೇಕು. ಮತ್ತು ಮೇಲಿಂದ ಬೊಡ್ಡೆಯ ಎಲೆಯನ್ನು ಕಟ್ಟಿ ನೆರಳು ಮಾಡಬೇಕು.

ಬೊಡ್ಡೆಯ ತೊಗಟೆಯನ್ನು ಸೀಳುವಾಗ ಅಡ್ಡ ಸೀಳನ್ನು ಕೆಳಗೆ ಮಾಡದೆ ನೆಟ್ಟನ್ನ ಸೀಳಿನ ತಲೆಯ ಮೇಲೆ " T " ಹೀಗೆ ಮಾಡುವದೂ ಉಂಟು. ಆದರೆ ಇದರಲ್ಲಿ ಕಣ್ಣನ್ನು ಒಳಗೆ ಸೇರಿಸುವಾಗ ಮೇಲಿಂದ ಕೆಳಗೆ ಒತ್ತಬೇಕಾಗುವದರಿಂದ ಕಣ್ಣಿಗೆ ಪೆಟ್ಟು ಹತ್ತುವ ಸಂಭವವಿರುತ್ತದೆ.

ತೊಗಟೆಯನ್ನು ಅಡ್ಡವಾಗಿ ಸೀಳದೆ ಬರೇ ನೆಟ್ಟಗಷ್ಟೇ ಸೀಳಿ ಕಣ್ಣು ಸೇರಿಸಿ ಬಿಡುವದೂ ಸಾಧ್ಯವು. ನೆಟ್ಟಗೆ ಸೀಳಿದ ಮೇಲೆ ಸೀಳಿನ ಕಡೆಗೆ ಬೊಡ್ಡೆಯನ್ನು ತುಸು ಬಗ್ಗಿಸಿದರೆ ತೊಗಟೆಯು ತಾನಾಗಿ ತೆರೆಯುತ್ತದೆ. ಅದರಲ್ಲಿ ಕಣ್ಣು ಸೇರಿಸಿ ಬೊಡ್ಡೆಯನ್ನು ಬಿಟ್ಟರೆ, ಅದು ನೆಟ್ಟಗೆ ನಿಂತ ಬಳಿಕ ಕಣ್ಣು ತನ್ನ ಸ್ಥಳದಲ್ಲಿ ಸರಿಯಾಗಿ ಕೂಡ್ರುತ್ತದೆ. ಅದರ ಮೇಲಿಂದ ಬಾಳೆ ಪಟ್ಟೆಯಿಂದ ಕಟ್ಟಿ ಬಿಡಬೇಕು.

ಕಣ್ಣು ಹಚ್ಚಿದಂದಿನಿಂದ ಮೂರು ವಾರಗಳಲ್ಲಿ ಚಿಗಿತು ಬೆಳೆಯಲಾರಂಭಿಸುತ್ತದೆ ಈ ಚಿಗುರು ಆರೆಂಟು ಇಂಚುಗಳು ಉದ್ದವಾದ ಬಳಿಕ ಬೊಡ್ಡೆಯ ತುದಿಯನ್ನು ಕಣ್ಣು ಹಚ್ಚಿದ ಸ್ಥಳದಿಂದ ಸುಮಾರು ಎರಡು ಇಂಚು ಎತ್ತರದ ಮೇಲೆ ಕತ್ತರಿಸಿ ಹಾಕಬೇಕು. ಮತ್ತು ಬೊಡ್ಡೆಯ ಬುಡದ ಸಮೀಪ ಒಂದು ಕೋಲನ್ನು ನೆಟ್ಟು ಚಿಗುರು ಅಡ್ಡ ಬೆಳೆಯದೆ ನೆಟ್ಟಗೆ ಬೆಳೆಯಬೇಕೆಂದು ಅದಕ್ಕೆ ಕಟ್ಟಬೇಕು. ಚಿಗುರು ಸುಮಾರು ಒಂದು ಫೂಟು ಬೆಳೆದ ಬಳಿಕ

ಬೊಡ್ಡೆಯ ತುದಿಯನ್ನು ಕಣ್ಣು ಹಚ್ಚಿದ ಸ್ಥಳಕ್ಕೆ ಹತ್ತಿ ಸರಿಯಾಗಿ ಕತ್ತರಿಸ ಬೇಕು. ಇದರಿಂದ ಕಣ್ಣಿನ ಚಿಗುರು ನೆಟ್ಟಗೆ ಬೆಳೆಯಲಿಕ್ಕೆ ಅನುಕೂಲವಾಗುತ್ತಗೆ. ಕಣ್ಣು ಹಚ್ಚಿದ ಸ್ಥಳದ ಕೆಳಗೆ ಬೊಡ್ಡೆಯ ಚಿಗುರುಗಳು ಮೂಡಿದರೆ ಅವನ್ನೆಲ್ಲ ಚಿವುಟಿ ಹಾಕಬೇಕು. ಇದರ ಕಾರಣವನ್ನು ಭೆಟ್ಟಿ ಕೊಡಿಯ ಕೆಳಗೆ ಕೊಟ್ಟಿರುತ್ತದೆ.

ಕಣ್ಣಿನ ಚಿಗುರು ಒಂದೂವರೆ ಫೂಟು ಉದ್ದವಾಗಿ ಬೆಳೆದ ಬಳಿಕ, ಕಣ್ಣು ಹಚ್ಚಿದ ಗಿಡವನ್ನು ಹೊಲದಲ್ಲಿ ಕಿತ್ತು ನೆಡುವುದು ಕೀಳುವಾಗ ಬೊಡ್ಡೆಯ ಬೇರುಗಳಿಗೆ ಪೆಟ್ಟಿನ ನೋವಾಗದಂತೆ ಎಚ್ಚರ ಪಡಬೇಕು. ನೆಟ್ಟ ಬಳಿಕ ಗಿಡಗಳು ಬದುಕುವ ವರೆಗೆ ಅವುಗಳ ಮೇಲೆ ತುಸು ನೆರಳು ಮಾಡುವದು ಒಳ್ಳೇದು. ಕಿತ್ತಳೆ, ಮೋಸಂಬಿ, ನಿಂಬೆ, ಮಾವು, ಸೀರಲ ಮುಂತಾದ ಗಿಡಗಳನ್ನು ಕಣ್ಣು ಹಚ್ಚಿ ಬೆಳೆಸುತ್ತಾರೆ.

(೨) ತುಂಡು ಕಣ್ಣು :—ಮೇಲೆ ಹೇಳಿದಂತೆ ಕಣ್ಣಿನ ಟೊಂಗೆಯನ್ನು ಬೊಡ್ಡೆಯ ಸಮೀಪ ತಂದು, ಎಲೆಗಳನ್ನೆಲ್ಲ ಅರ್ಧ ಇಂಚು ತೊಟ್ಟು ಬಿಟ್ಟು ಕತ್ತರಿಸಿ, ಕಣ್ಣಿನ ಮೇಲ್ಬದಿಗೆ ಅರ್ಧ ಇಂಚು, ಎಡಬಲಗಳಲ್ಲಿ ಕಾಲು ಇಂಚು ಇರುವ ತೊಗಟೆಯ ಭಾಗದ ಕೂಡ ಕಣ್ಣನ್ನು ಏಳಿಸುತ್ತಾರೆ. ಏಳಿಸುವಾಗ ಬರೇ ತೊಗಟೆಯನ್ನು ಮಾತ್ರ ಚೂರಿಯ ಎಲೆಯಿಂದ ಸೀಳಿ, ಅದರ ಹಿಡಿಕೆಯ ಬುಡದಿಂದ ತೊಗಟೆಯನ್ನು ನೋವಾಗದಂತೆ ಏಳಿಸುತ್ತಾರೆ. ಈ ತೊಗಟೆಯ ಭಾಗವನ್ನು ನಾಲಿಗೆಯ ಮೇಲೆ ಇಟ್ಟು ತೊಯ್ಸಿ, ಬೊಡ್ಡೆಯ ಮೇಲೆ ಅನುಕೂಲವಾದ ಸ್ಥಳದಲ್ಲಿ ಅದನ್ನು ಅಂಟಿಸಿ ತೆಗೆಯುತ್ತಾರೆ. ಬಳಿಕ ಅದರಿಂದ ಬೊಡ್ಡೆಯ ಮೇಲೆ ಒಗ್ಗೆಯಾದ ಭಾಗದ ತೊಗಟೆಯನ್ನು ಒಳಗಿನ ಎಲುಬಿಗೆ ನೋವಾಗುದಂತೆ ಏಳಿಸಿ ತೆಗೆದು, ಅದರ ಸ್ಥಳದಲ್ಲಿ ಕಣ್ಣಿನ ತೊಗಟೆಯನ್ನು ಕೂಡ್ರಿಸಿ, ಬಾಳೆ ಪಟ್ಟಿಯಿಂದ ಕಟ್ಟುತ್ತಾರೆ.

ಉಳಿದ ಎಲ್ಲ ಸಂಗತಿಗಳನ್ನು ಢಾಲು ಕಣ್ಣಿನ ವಿಷಯದಲ್ಲಿ ಹೇಳಿದಂತೆ ಮಾಡತಕ್ಕದ್ದು.

ಬೊಡ್ಡೆಯ ಮೇಲಿನ ತೊಗಟೆಯು ಚನ್ನಾಗಿ ಏಳದೆ ಇದ್ದಲ್ಲಿ ಈ ತುಂಡು ಕಣ್ಣಿನ ಪದ್ಧತಿಯನ್ನು ಅನುಸರಿಸ ಬಹುದು

(೩) ಉಂಗುರ ಗಣ್ಣು:—ತುಂಡು ಕಣ್ಣಿನಲ್ಲಿ ಕಣ್ಣಿನ ಕೂಡ ತೊಗಟೆಯ ಸಣ್ಣ ಭಾಗವನ್ನು ಮಾತ್ರ ಇಟ್ಟು ಕಣ್ಣನ್ನು ಏಳಿಸುತ್ತಾರಷ್ಟೇ. ಹಾಗೆ ಮಾಡದೆ ಕಣ್ಣಿನ ಮೇಲ್ಬದಿಗೂ ಕಳ ಬದಿಗೂ ಅರ್ಧ ಇಂಚು ಅಂತರದಲ್ಲಿ ತೊಗಟೆಯನ್ನು ಟೊಂಗೆಯ ಸುತ್ತಲೂ ಕತ್ತರಿಸಿ, ಕಣ್ಣಿನ ವಿರುದ್ಧ ದಿಕ್ಕಿಗೆ

ಅದನ್ನು ನೆಟ್ಟಗೆ ಸೀಳಿ, ತುಂಡು ಕಣ್ಣಿನ ತೊಗಟೆಯನ್ನು ಏಳುಸುವಂತೆ ಚೂರಿಯ ಬುಡದಿಂದ ಸುತ್ತಲೂ ತೊಗಟೆಯನ್ನು ಏಳಿಸಿ, ಬೊಡ್ಡೆಯ ಮೇಲೆ ಅಷ್ಟೇ ಭಾಗದ ತೊಗಟೆಯನ್ನು ಏಳಿಸಿ, ಕಣ್ಣನ್ನು ಕೂಡ್ರಿಸಿ ಕಟ್ಟಿ ಬಿಡಬೇಕು. ಉಳಿದ ಎಲ್ಲ ಸಂಗತಿಗಳೂ ತುಂಡು ಕಣ್ಣಿನಲ್ಲಿ ಹೇಳಿದಂತೆ. ಕಣ್ಣಿನ ತೊಗಟೆಯನ್ನು ಏಳಿಸಿದ ಬಳಿಕ ಅದು ಸಣ್ಣ ನಳಿಗೆಯಂತೆ ನಡುವೆ ಪೊಳ್ಳಾಗಿದ್ದು, ಅದರ ಮುಂಬದಿಯಲ್ಲಿ ಕಣ್ಣು ಉಂಗುರದಲ್ಲಿ ಹರಳನ್ನು ಕೂಡ್ರಿಸಿದಂತೆ ಕಾಣುವದರಿಂದ ಈ ಪದ್ಧತಿಗೆ ಉಂಗುರಗಣ್ಣು ಎಂಬ ಹೆಸರು ಬಂದಿದೆ.

ಇದಿಷ್ಟು ಹಣ್ಣಿನ ಗಿಡಗಳ ಅಭಿವೃದ್ಧಿಯ ವಿಷಯವಾಯಿತು. ಇದರಲ್ಲಿ ಎಷ್ಟೋ ಪದ್ಧತಿಗಳನ್ನು ವರ್ಣಿಸಿರುತ್ತೇವೆ. ಈ ಎಲ್ಲ ಪದ್ಧತಿಗಳನ್ನೂ ಪ್ರತಿಯೊಂದು ಗಿಡವನ್ನು ಬೆಳೆಸುವಾಗಲೂ ಉಪಯೋಗಿಸುತ್ತಾರೆಂದಾಗಲಿ, ಉಪಯೋಗಿಸುವದು ಸಾಧ್ಯವೆಂದಾಗಲಿ ಇದರ ಅರ್ಥವಲ್ಲ. ಪರಿಸ್ಥಿತಿಯನ್ನೂ, ಗುಣಾವಗುಣಗಳನ್ನೂ ಲಕ್ಷದಲ್ಲಿ ತಂದು ಯಾವ ಪದ್ಧತಿಯು ಅನುಕೂಲವೂ ಸಾಧ್ಯವೂ ಆಗಿರುವದೋ ಅದನ್ನೇ ಅನುಸರಿಸತಕ್ಕದ್ದು. ತೋಟದಲ್ಲಿ ಅನೇಕ ತರದ ಹಣ್ಣಿನ ಗಿಡಗಳೂ ಹೂವಿನ ಗಿಡಗಳೂ ಇರುತ್ತವಾದ್ದರಿಂದ ಈ ಎಲ್ಲ ಪದ್ಧತಿಗಳೂ ಒಂದಲ್ಲ ಒಂದು ಪ್ರಸಂಗದಲ್ಲಾದರೂ ಉಪಯೋಗವಾಗಬಹುದು. ಇವೆಲ್ಲವನ್ನೂ ತಿಳಿದಿರುವದು ಲೇಸು.

ಈ ಕೆಳಗಿನ ಕೋಷ್ಟಕದಲ್ಲಿ ಮುಖ್ಯವಾದ ಹಣ್ಣಿನ ಗಿಡಗಳನ್ನು ಹ್ಯಾಗೆ ಅಭಿವೃದ್ಧಿ ಮಾಡುತ್ತಾರೆಂಬದನ್ನು ಕೊಟ್ಟಿರುತ್ತದೆ:—

| ಹೆಸರು | ಸಾಧ್ಯವಿರುವ ಪದ್ಧತಿ | ಹೆಚ್ಚಾಗಿ ಬಳಿಕೆಯಲ್ಲಿರುವ ಪದ್ಧತಿ |
|---|---|---|
| ೧. ಮಾವು | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಡಿ ಕಟ್ಟಿ | (ಆ) ಭೆಟ್ಟಿ ಕೊಡಿ, ಬಗಲ ಕೊಡಿ, ಬೊಡ್ಡೆ ಕೊಡಿಗಳಿಂದ |
| | (ಇ) ಕಣ್ಣು ಹಚ್ಚಿ | |
| ೨. ಬಾಳೆ | (ಅ) ಬೀಜಗಳಿಂದ | (ಅ) ಮರಿಗಳಿಂದ |
| | (ಆ) ಮರಿಗಳಿಂದ | |
| ೩. ದ್ರಾಕ್ಷೆ | (ಅ) ಬೀಜಗಳಿಂದ | (ಆ) ಕೊಂಬೆಗಳಿಂದ |
| | (ಆ) ಕೊಂಬೆಗಳಿಂದ | |
| | (ಇ) ಕೊಡಿ ಕಟ್ಟಿ | |

| ಹೆಸರು | ಸಾಧ್ಯವಿರುವ ಪದ್ಧತಿ | ಹೆಚ್ಚಾಗಿ ಬಳಿಕೆಯಲ್ಲಿರುವ ಪದ್ಧತಿ |
|---|---|---|
| ೪. ಕಿತ್ತಳೆ ವರ್ಗ | (ಅ) ಬೀಜಗಳಿಂದ | (ಅ) ಕಣ್ಣು ಹಚ್ಚಿ |
| | (ಆ) ಗೂಟಿಯಿಂದ | (ಆ) ಬೀಜಗಳಿಂದ |
| | (ಇ) ಕೊಡಿ ಕಟ್ಟಿ | |
| | (ಈ) ಕಣ್ಣು ಹಚ್ಚಿ | |
| ೫. ಪೇರಲ | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಂಬೆಗಳಿಂದ | (ಆ) ಭೆಟ್ಟಿ ಕೊಡಿಯಿಂದ |
| | (ಇ) ಕೊಡಿ ಕಟ್ಟಿ | |
| | (ಈ) ಕಣ್ಣು ಹಚ್ಚಿ | |
| ೬. ಡಾಳಿಂಬ | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಂಬೆಗಳಿಂದ | |
| | (ಇ) ಕೊಡಿ ಕಟ್ಟಿ | |
| ೭. ಚಿಕ್ಕೂ | (ಅ) ಬೀಜಗಳಿಂದ | (ಅ) ಗೂಟಿಯಿಂದ |
| | (ಆ) ಕೊಡಿ ಕಟ್ಟಿ | (ಆ) ಕೊಡಿ ಕಟ್ಟಿ |
| | (ಇ) ಗೂಟಿಯಿಂದ | |
| ೮. ಅಂಜೀರ | (ಅ) ಕೊಂಬೆಗಳಿಂದ | (ಅ) ಗೂಟಿಯಿಂದ |
| | (ಆ) ಗೂಟಿಯಿಂದ | (ಆ) ಕೊಂಬೆಗಳಿಂದ |
| ೯. ಹಲಸು | (ಅ) ಬೀಜಗಳಿಂದ | (ಅ) ಬೀಜಗಳಿಂದ |
| ೧೦. ನೇರಲ | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಡಿ ಕಟ್ಟಿ | (ಆ) ಕೊಡಿ ಕಟ್ಟಿ |
| | (ಇ) ಕಣ್ಣು ಹಚ್ಚಿ | |
| ೧೧. ಪರಂಭಾಳೆ | (ಅ) ಮರಿಗಳಿಂದ | (ಅ) ಮರಿಗಳಿಂದ |
| ೧೨. ಗೋವೆ ಹಣ್ಣು | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಡಿ ಕಟ್ಟಿ | |
| | (ಇ) ಕಣ್ಣು ಹಚ್ಚಿ | |
| ೧೩. ಸೀತಾ ಫಲದ ವರ್ಗ | (ಅ) ಬೀಜಗಳಿಂದ | (ಅ) ಬೀಜಗಳಿಂದ |
| | (ಆ) ಕೊಡಿ ಕಟ್ಟಿ | |

**ಗಿಡಗಳ ಅಭಿವೃದ್ಧಿಗೆ ಬೇಕಾಗುವ ಸಾಧನಗಳು :—** ಸಣ್ಣ ಪ್ರಮಾಣದಲ್ಲಿ ಗಿಡಗಳನ್ನು ಅಭಿವೃದ್ಧಿ ಪಡಿಸಿ ಸ್ವಂತದ ತೋಟಗಳಲ್ಲಿ ಉಪಯೋಗಿಸಿಕೊಳ್ಳಲಿಕ್ಕೆ ಕೆಳಗಿನ ಸಾಧನಗಳು ಬೇಕಾಗ ಬಹುದು. ಅವುಗಳ ಅವಶ್ಯಕತೆಯು ಯಾವಾಗಲೂ ಇರುತ್ತದೆ. ಅವು ಹತ್ತಿರ ಇಲ್ಲದಿದ್ದರೆ ಕೆಲಸವು ಮನಸ್ಸಿಗೆ ತಕ್ಕಂತೆ ಆಗುವದಿಲ್ಲ. ಅವುಗಳ ಉಪಯೋಗವನ್ನೂ, ಬೆಲೆಯನ್ನೂ ಅಂದಾಜಿನಿಂದ ಕೊಟ್ಟಿದ್ದೇವೆ ದೇಶ ಕಾಲಕ್ಕನುಸರಿಸಿ ಅವುಗಳಲ್ಲಿ ತುಸು ಹೆಚ್ಚು ಕಡಿಮೆಯಾಗಬಹುದೆಂಬದನ್ನು ಮರೆಯಲಾಗದು. ಅವು ಯಾವವೆಂದರೆ :—

| | ಬೆಲೆ ರೂ. |
|---|---|
| (೧) **೨ ಗುದ್ದಲಿಗಳು ಅಥವಾ ಪಿಕಾಸುಗಳು**—ನೆಲವನ್ನು ಅಗೆಯುವದಕ್ಕೆ ಇವು ಬೇಕಾಗುತ್ತವೆ. ಮಡಿಗಳನ್ನು ಮಾಡುವಾಗಲೂ, ಕುಣಿಗಳನ್ನು ತೆಗೆಯುವಾಗಲೂ ಇವಿಲ್ಲದೆ ಕೆಲಸವಾಗಲಾರದು ... ... ... | ೩-೦-೦ |
| (೨) **೨ ಸಲಿಕೆಗಳು**—ನೆಲವನ್ನು ಅಗೆದ ಬಳಿಕ ಮಣ್ಣು ಎಳೆಯಲಿಕ್ಕೂ, ತುಂಬಲಿಕ್ಕೂ, ಹೆಂಟೆಗಳನ್ನು ಕುಟ್ಟಲಿಕ್ಕೂ ಇವು ಬೇಕು ... ... ... | ೩-೦-೦ |
| (೩) **೧ ಕೈ ಹಲಕಿ**—ಇದರಿಂದ ಮಡಿಗಳನ್ನು ಸಪಾಟ ಮಾಡುವದೂ, ಸಣ್ಣ ಹರಳುಗಳನ್ನೂ ಹೆಂಟೆಗಳನ್ನೂ ತೆಗದು ಚಲ್ಲುವದೂ ಆಗುತ್ತವೆ ... ... ... | ೧-೮-೦ |
| (೪) **೨ ಖುರ್ಪಿಗಳು**—ಇವು ಕಳೆ ತೆಗೆಯಲಿಕ್ಕೂ, ಮಣ್ಣು ಕೆದರಲಿಕ್ಕೂ ಇನ್ನೂ ಅನೇಕ ಕೆಲಸಗಳಿಗೂ ಬಹು ಉಪಯುಕ್ತವಾದವುಗಳು. ತೋಟಿಗನ ಕಯ್ಯಲ್ಲಿ ಇವು ಇದ್ದೇ ಇರಬೇಕು ... ... ... | ೦-೪-೦ |
| (೫) **೧ ಸಣ್ಣ ಎಡೆಗುಂಟೆ**—ಇದರಿಂದ ಗಿಡಗಳ ಸಾಲುಗಳ ನಡುವಿನ ಹುಲ್ಲು ಕಳೆಗಳನ್ನು ತೆಗೆಯುವದೂ, ಮಣ್ಣು ಸೈಲು ಮಾಡುವದೂ ಆಗುತ್ತವೆ ... ... | ೧-೦-೦ |
| (೬) **೨ ಬುಟ್ಟಿಗಳು**—ಮಣ್ಣು ಎತ್ತುವಾಗಲೂ ಗೊಬ್ಬರ, ರೇವೆಗಳನ್ನು ಮಡಿಗಳಲ್ಲಿ ಹಾಕುವಾಗಲೂ, ಕುಣಿಗಳನ್ನು ತೆಗೆ | |

ಬೆಲೆ ರೂ.

ಯುವಾಗಲೂ ಇವು ಬೇಕೇ ಬೇಕು. ಬಿದುರಿನ ಬುಟ್ಟಿಗಳಿಗಿಂತ ಕಬ್ಬಿಣ ಬುಟ್ಟಿಗಳು ಹೆಚ್ಚುಕಾಲ ತಡೆಯುವದರಿಂದ ಅವನ್ನೇ ಕೊಳ್ಳುವದು ಲೇಸು ... ... ೨-೦-೦

(೭) ೨ ಬಾಲದಿಗಳು—ಇವು ನೀರು ಒಯ್ಯಲಿಕ್ಕೆ ಬೇಕಾಗುತ್ತವೆ. ಮಧ್ಯಮ ಆಕಾರದವು, ಅಂದರೆ ಒಂದು ಕೊಡ ನೀರು ಹಿಡಿಯುವವು ಇದ್ದರೆ ಸಾಕು ... ... ೩-೦-೦

(೮) ೨ ಝಾರಿಗಳು—ಇವುಗಳಿಗೆ ಬಾಲದಿಗಳಂತೆ ಅಗಲಾದ ಬಾಯಿ ಇರುವದಿಲ್ಲ. ಇವುಗಳ ಬಾಯಿಯು ಅರ್ಧ ಮುಚ್ಚಿರುತ್ತದೆ. ಇವಕ್ಕೆ ಗಿಂಡಿಗಳಿಗಿರುವಂತೆ ಕೊಂಬು ಇರುತ್ತದೆ. ಕೊಂಬಿನ ತುದಿಗೆ ತುಂತುರು ಬೀಳುವ ಜಾಳಿಗೆಯಿರುತ್ತದೆ. ಇವುಗಳಿಂದ ಮಡಿಗಳಲ್ಲಿ ಬಿತ್ತಿದ ಬೀಜಗಳೂ, ಸಣ್ಣ ಅಗೆಗಳೂ ಕಿತ್ತು ಹೋಗದಂತೆ ನೀರು ಚಿಮ್ಮಿಸುವದು ಸಾಧ್ಯವಾಗುತ್ತದೆ. ಇವು ಮಧ್ಯಮ ಆಕಾರದವಿದ್ದರೆ ಸಾಕು ... ... ... ೪-೦-೦

(೯) ೧ ಕೈ ಪಿಚಕಾರಿ— ಇದು ಹಿತ್ತಾಳಿಯದಿದ್ದರೆ ಒಳ್ಳೇದು. ಇದರಿಂದ ಸಣ್ಣ ಗಿಡಗಳ ಮೇಲೂ, ಅಗೆಗಳ ಮೇಲೂ ರೋಗವಾದಾಗ ಔಷಧಗಳನ್ನು ಹಾರಿಸಲು ಬರುತ್ತದೆ ... ೧೦-೦-೦

(೧೦) ೧ ಕಣ್ಣು ಹಚ್ಚುವ ಚೂರಿ—ಇದು ಕಣ್ಣು ಹಚ್ಚುವಾಗ ಬಹಳ ಉಪಯುಕ್ತವಾದದ್ದು ... ... ೫-೦-೦

(೧೧) ೧ ಕೊಡಿಕಟ್ಟುವ ಚೂರಿ—ಇದು ಕಣ್ಣು ಹಚ್ಚುವ ಚೂರಿಗಿಂತ ಬಲವಾದದ್ದು. ಕೊಡಿಕಟ್ಟುವ ಕೆಲಸಕ್ಕೆ ಅತ್ಯವಶ್ಯವಾದದ್ದು ... ... ... ೩-೦-೦

(೧೨) ೧ ಕತ್ತರಿ (ಸಿಕೇಟರ)—ಇದರಿಂದ ಸಣ್ಣ ಸಣ್ಣ ಟೊಂಗೆಗಳನ್ನೂ, ಬೊಡ್ಡೆಯ ತುದಿಗಳನ್ನೂ ಗಿಡಗಳಿಗೆ ಪೆಟ್ಟಾಗದಂತೆ ಕತ್ತರಿಸ ಬಹುದು ... ... ೫-೦-೦

(೧೩) ೧ ಸಣ್ಣ ಕೊಡ್ಲಿ—ಮರಗಳ ಇಲ್ಲವೆ ಗಿಡಗಳ ಟೊಂಗೆಗಳನ್ನು ಕಡಿಯಲಿಕ್ಕೆ ಇದು ಬೇಕಾಗುತ್ತದೆ ... ೧-೦-೦

(೧೪) ೧ ಕತ್ತಿ— } ಇವೆರಡೂ ಬೊಡ್ಡೆ ಕೊಡಿಯಲ್ಲೂ,
(೧೫) ೧ ಕೈ ಕರಗಸ— } ಟೊಂಗೆಗಳನ್ನು ಕಡಿಯಲಿಕ್ಕೂ ಬೇಕಾಗುತ್ತವೆ ... ... ೧-೮-೦

(೧೬) ೧ ೫೦ ಫೂಟು ಉದ್ದದ ಟೇಪು ಪಟ್ಟಿ—ಮಡಿಗಳನ್ನು ಮಾಡುವಾಗಲೂ, ಕುಣಿಗಳನ್ನು ಅಗೆಯುವಾಗಲೂ, ಗಿಡಗಳನ್ನು ನೆಡುವಾಗಲೂ ಅಳೆಯಲಿಕ್ಕೆ ಇದು ಬೇಕಾಗುತ್ತದೆ ೫-೦-೦

ಒಟ್ಟು ರೂ. ೪೮-೪-೦

ಮುಂದಿನ ಪ್ರಕರಣಗಳಲ್ಲಿ ಬೇರೆ ಬೇರೆ ಹಣ್ಣಿನ ಮರಗಳ ಸಾಗುವಳಿ ಮಾಡುವ ಕ್ರಮವನ್ನು ಸಾದ್ಯಂತವಾಗಿ ವಿವರಿಸುವ.



## ಪ್ರಕರಣ ೪

## ಮಾವು

ಮಾವಿನ ಹಣ್ಣು ಹಣ್ಣುಗಳಲ್ಲೆಲ್ಲ ಅತ್ಯುತ್ತಮವಾಗಿರುವದು! ಇದು ಆಬಾಲವೃದ್ಧರಿಗೂ ಸೇರುವದು. ಇದನ್ನು ಮಿಡಿ, ಕಾಯಿ, ಹಣ್ಣುಗಳೆಂಬ ಯಾವ ಸ್ಥಿತಿಯಲ್ಲಾದರೂ ಉಪಯೋಗಿಸಬಹುದು. ಮಾವಿನಿಂದ ಆಯಾಯ ಸ್ಥಿತಿಗಳನುಸರಿಸಿ ಅನೇಕ ರುಚಿಕರ ಪದಾರ್ಥಗಳನ್ನು ಮಾಡಿ ತಿನ್ನಬಹುದಾದ್ದ ರಿಂದ ಅದರ ಲೋಕಪ್ರಿಯತೆಗೆ ಮಿತಿಯಿಲ್ಲದಾಗಿದೆ. "ಮಾವಿನ ಹಣ್ಣುಗಳನ್ನು ಬೆಳೆಸದ ದೇಶದ ಜನರು ನಿಜವಾಗಿಯೂ ದೈವಹೀನರು" ಎಂಬ ಉದ್ಗಾರವು ಅಕ್ಷರಶಃ ನಿಜವಾಗಿರುತ್ತದೆ. ನಮ್ಮ ಕರ್ನಾಟಕವು ಈ ದೃಷ್ಟಿಯಿಂದ ಗೈವಗೇಡಿ ಯಲ್ಲವೆಂಬದು ಎಷ್ಟು ಆನಂದದ ಸಂಗತಿಯು!! ಕರ್ನಾಟಕದಲ್ಲಿ ಮಾವಿನ ಮರಗಳು ಎಲ್ಲೆಲ್ಲಿಯೂ ಕಂಡು ಬರುವವು. ಉತ್ತರ ಕನ್ನಡ, ಧಾರವಾಡ, ಬೆಳ ಗಾಂವಿ ಜಿಲ್ಹೆಗಳಲ್ಲಿ ಸಾವಿರಾರು ಎಕರೆಗಳ ಕ್ಷೇತ್ರವು ಮಾವಿನ ತೋಪುಗಳಿಂದ ತುಂ ಬಿರುವದು ಇವು ಮುಖ್ಯವಾಗಿ ಊರ ಮಾವಿನ ಮರಗಳಿರುತ್ತವೆ. ಇತ್ತಿತ್ತ ಲಾಗಿ ಕೊಡಿಕಟ್ಟಿದ ಗಿಡಗಳ ತೋಟಗಳು ಪಸರಿಸುತ್ತಿರುವವಾದರೂ, ಅವು ಇನ್ನೂ ಸಾವಕಾಶವಾಗಿ ನಡೆದಿವೆ. ತೀವ್ರಗತಿಯಿಂದ ಅವು ಸಾಗಲಿಕ್ಕೆ ಹುರುಪು ಕೊಡು ವದು ಅವಶ್ಯವಾಗಿರುತ್ತದೆ.

**ಮಾವಿನ ಮರಗಳ ಉತ್ಪತ್ತಿ ಸ್ಥಾನವು** ಇಂಥದೇ ಎಂದು ನಿಶ್ಚ ಯವಾಗಿ ಹೇಳಲಿಕ್ಕಾಗದಿದ್ದರೂ, ಅದು ಹಿಂದುಸ್ಥಾನ-ಮಲಾಯಾಗಳಲ್ಲಿ ಇರು ತ್ತದೆಂಬ ವಿಷಯದಲ್ಲಿ ಸಂಶಯವಿದ್ದಂತೆ ತೋರುವದಿಲ್ಲ. ಈ ದೇಶಗಳ ಕಾಡುಗ ಳಲ್ಲಿ ತಾವಾಗಿ ಹುಟ್ಟಿ ಬೆಳೆಯುತ್ತಿರುವ ಅನೇಕ ಮಾವಿನ ಮರಗಳು ಕಂಡು ಬರು ತ್ತವೆ. "ಪೂರ್ವ ಹಿಮಾಚಲದ ಬುಡದಲ್ಲೂ, ಬ್ರಹ್ಮದೇಶ ಮಲಾಯಾಗ ಳಲ್ಲೂ ಎಲ್ಲಾದರೊಂದು ಕಡೆ ಮಾವಿನ ಮರದ ಮೂಲ ಉತ್ಪತ್ತಿಯಾಗಿರಬೇ ಕೆಂದು ಡಿ ಕಂಡೋಲರ ಮತವಿರುತ್ತದೆ." ಈ ದೇಶಗಳ ಭಾಷಗಳಲ್ಲಿ ಮಾ ವಿಗೆ ಸ್ವತಂತ್ರ ಶಬ್ದಗಳು ಇರುತ್ತವೆ. ಮಾವು ಎಂಬದೇ ಅಚ್ಚಕನ್ನಡ ಶಬ್ದವಾಗಿ ರುತ್ತದೆ. ಇದಕ್ಕೆ ಮಲಾಯಾ ಭಾಷೆಯಲ್ಲಿ 'ಮಾಂಗಾ' ಎಂತಲೂ, ಚಿನೀ ಭಾಷೆಯಲ್ಲಿ 'ಮ್ಯಾಕ್ವೋ' ಎಂತಲೂ, ತಾಲೀಮ ಭಾಷೆಯಲ್ಲಿ 'ಮಾಗಾಜ' ಎಂತ ಲೂ ಹೆಸರು. ಸಂಸ್ಕೃತ ಭಾಷಯಲ್ಲಿ ಮಾವಿಗೆ ಆಮ್ರ, ಚೂತ, ರಸಾಲ, ಸಹ ಕಾರ, ಅತಿಸೌರಭ ಎಂಬ ಹೆಸರುಗಳನ್ನು ಅಮರಕೋಶದಲ್ಲಿ ಕೊಟ್ಟಿದೆ. ಇವುಗ ಳಲ್ಲಿಯೂ ಆಮ್ರ ಶಬ್ದದ ಅಪಭ್ರಂಶವಾಗಿ ಆಂಬ, ಆಂಬಾ ಮುಂತಾದ ಶಬ್ದಗಳು

ಸಂಸ್ಕೃತ ಮೂಲವಾಗಿರುವ ಹಿಂದುಸ್ಥಾನೀ, ಮಾರಾಠಿ, ಗುಜರಾತಿ, ಬಂಗಾಲೀ ಮುಂತಾದ ಭಾಷೆಗಳಲ್ಲಿ ಬಂದಿರುತ್ತವೆ. ಸಂಸ್ಕೃತದ ಆಮ್ರ ಶಬ್ದಕ್ಕೂ ಅದರಿಂದುಂಟಾದ ಇತರ ಭಾಷೆಗಳ ಆಂಬ, ಆಂಬಾ ಶಬ್ದಗಳಿಗೂ, ಮೇಲೆ ಹೇಳಿದ ಮಾವು, ಮಾಂಗಾ, ಮ್ಯಾಕ್ಕೋ, ಮಾಗಾಜ ಮುಂತಾದ ಶಬ್ದಗಳಿಗೂ ಏನೂ ಸಂಬಂಧ ಇದ್ದಂತೆ ತೋರುವದಿಲ್ಲ. ಇದರ ಮೇಲಿಂದ ಆರ್ಯರು ಬಹುಕಾಲದಿಂದ ವಾಸಿಸುತ್ತಿರುವ ಉತ್ತರ ಹಿಂದುಸ್ಥಾನದಲ್ಲೂ, ಅನಾರ್ಯರು ದ್ರಾವಿಡರೂ ವಾಸ ಮಾಡುತ್ತಿರುವ ದಕ್ಷಿಣ ದೇಶಗಳಲ್ಲೂ ಮಾವಿನ ಮರಗಳು ಸ್ವಾಭಾವಿಕವಾಗಿಯೇ ಬೆಳೆಯುತ್ತಿರಬೇಕು ಎಂದು ತರ್ಕಿಸಬೇಕಾಗುತ್ತದೆ ಇದಲ್ಲದೆ ಪಾಶ್ಚಿಮಾತ್ಯ ಭಾಷೆಗಳಾದ ಇಂಗ್ರಜಿ, ಫ್ರೆಂಚ, ಡಚ್ ಭಾಷೆಗಳಲ್ಲಿ ಮಾವಿಗೆ ಅನುಕ್ರಮವಾಗಿ ಮ್ಯಾಂಗೋ, ಮ್ಯಾಂಗ್ಯೂ, ಮ್ಯಾಂಗಾ ಎಂಬ ಹೆಸರುಗಳಿರುತ್ತವೆ ಪಾಶ್ಚಿಮಾತ್ಯರು ಪೂರ್ವದ ದೇಶಗಳ ಕೂಡ ಮೊದಲು ಸಂಬಂಧ ಬೆಳೆಸಿದಾಗ ಹಿಂದುಸ್ಥಾನ ಮಲಾಯದಾಗಳ ಸಮುದ್ರದಂಡೆಗುಂಟ ಮಾತ್ರ ಅವರ ವ್ಯವಹಾರವಿತ್ತು ಆದ್ದರಿಂದ ಅವರು ಮಾವಿನ ಹಣ್ಣನ್ನು ಈ ಸಮುದ್ರ ದಂಡೆಯ ಪ್ರದೇಶಗಳಲ್ಲಿರುವ ಹೆಸರುಗಳ ಮೇಲಿಂದ ತೆಗೆದುಕೊಂಡಿರಬೇಕು ಮಲಾಯಾ ಭಾಷೆಯಲ್ಲಿರುವ ಮಾಂಗಾ ಎಂಬ ಶಬ್ದದಿಂದ ಮ್ಯಾಂಗೋ, ಮ್ಯಾಂಗ್ಯೂ, ಮ್ಯಾಂಗಾ ಎಂಬ ಅಪಭ್ರಂಶಗಳಾಗಿರಬೇಕು. ಮತ್ತು ಹಿಂದುಸ್ಥಾನದೊಡನೆ ವ್ಯಾಪಾರಮಾಡುತ್ತಿದ್ದ ಅರಬರಿಂದಲೂ ಇತರರಿಂದಲೂ ಪೂರ್ವ ಆಫ್ರಿಕಾ, ಇಜಿಪ್ತ ಮುಂತಾದ ದೇಶಗಳಿಗೂ, ಮಲಾಯಾದಿಂದ ಫಿಲಿಪಾಯಿನ, ಕ್ಯೂಬಾ, ಜಮೇಕಾ ದೇಶಗಳಿಗೂ ಅಲ್ಲಿಂದ ಮುಂದೆ ಅಮೇರಿಕೆಗೂ ಮಾವಿನ ಜಾತಿಗಳು ಒಯ್ಯಲ್ಪಟ್ಟಿರಬೇಕು. ಈ ಪ್ರಸಾರವು ಸಮುದ್ರ ಪ್ರಯಾಣವು ಬೆಳೆದು ಬಂದಂತೆ ಇತ್ತಿತ್ತಲಾಗಿ ನಾಲ್ಕೆಂಟು ಶತಮಾನಗಳಲ್ಲಿ ಆಗಿರಬೇಕೆಂದೂ ತರ್ಕಿಸುತ್ತಾರೆ.

ಪುರಾಣಕಾಲದಿಂದಲೂ ಮಾವಿನ ಮರಗಳು ಹಿಂದುಗಳಿಂದ ಶ್ರೇಷ್ಠ ವೃಕ್ಷಗಳೆಂದು ಎಣಿಸಲ್ಪಡುತ್ತಿದ್ದವೆಂಬದಕ್ಕೆ ಆಧಾರವುಂಟು. ಬೃಹದಾರಣ್ಯಕೋಪನಿಷತ್ತಿನಲ್ಲೂ, ರಾಮಾಯಣದ ಅರಣ್ಯಕಾಂಡದಲ್ಲೂ ಮಾವಿನ ಮರಗಳ ಉಲ್ಲೇಖವುಂಟು ಕಾಲಿದಾಸನು ಶಾಕುಂತಲ, ವಿಕ್ರಮೋರ್ವಶೀಯ ಮುಂತಾದ ನಾಟಕಗಳಲ್ಲಿ ಮಾವಿನ ಮರಗಳನ್ನೂ, ಚಿಗುರುಗಳನ್ನೂ, ಹೂವುಗಳನ್ನೂ ಅನೇಕ ಸ್ಥಳಗಳಲ್ಲಿ ಉಲ್ಲೇಖಿಸಿದ್ದಾನೆ. ಚೂತಮಂಜರಿ, ಚೂತಕಲಿಕಾ, ರಸಾಲಕುಸುಮ, ಸ್ನಿಗ್ಧಪಲ್ಲವಃ ಸಹಕಾರಃ ಮುಂತಾದವನ್ನು ಉಪಮೆಗಾಗಿ ಉಪಯೋಗಿಸಿರುತ್ತಾನೆ. ಅಬುಲ ಫಜಲನ ಐನ-ಇ-ಅಕಬರಿಯಲ್ಲಿ ಅಕಬರನ ರಾಜ್ಯದಲ್ಲಿ ಅನೇಕ ಉತ್ತಮವಾದ ಮಾವಿನ ತೋಪುಗಳಿದ್ದವೆಂದು ಉಲ್ಲೇಖವಿದೆ.

ಆರ್ಯರ ವೈದ್ಯಶಾಸ್ತ್ರದಲ್ಲೂ ಮಾವಿನ ಮರಕ್ಕೆ ಯೋಗ್ಯಸ್ಥಾನವು ದೊರೆಕಿದೆ. "ಜಂಬೂನಿಂಬಾಮ್ರಪಲ್ಲವಃ" ಮುಂತಾದ ಉಪಯುಕ್ತ ಉಲ್ಲೇಖಗಳು ಅದರಲ್ಲಿರುತ್ತವೆ. ಮಾವಿನ ಎಲೆಯಿಂದ ಹಲ್ಲು ತಿಕ್ಕಬಹುದೆಂದೂ, ತಿಕ್ಕಿದರೆ ಹಲ್ಲುಗಳು ಬಹುದಿನ ತಡೆಯುವವೆಂದೂ ಹೇಳಿದೆ. ಇಂದಿಗಾದರೂ ಹಿಂದೂ ಜನರ ಧರ್ಮಕೃತ್ಯಗಳಲ್ಲಿ ಮಾವಿನ ಪಲ್ಲವಗಳನ್ನೂ, ಎಲೆಗಳನ್ನೂ ಕಲಶಗಳಲ್ಲಿಡಲಿಕ್ಕೂ, ತೋರಣಗಳಿಂದ ಅಲಂಕರಿಸಲಿಕ್ಕೂ ಉಪಯೋಗಿಸುತ್ತಾರೆ. ಈ ಪದ್ಧತಿಯು ಬಹು ಪ್ರಾಚೀನಕಾಲದ್ದು. ಇವುಗಳಿಂದ ನೋಡಿದರೆ ಮಾವಿನ ಮರದ ಶ್ರೇಷ್ಠತೆಯನ್ನೂ ಉಪಯೋಗವನ್ನೂ ಹಿಂದೂ ದೇಶದ ಜನರು ಯುಗಾಂತರಗಳಿಂದ ತಿಳಿದುಕೊಂಡಿದ್ದು, ಆದರ ಸಾಗುವಳಿಯನ್ನು ಪ್ರೀತಿಯಿಂದ ಮಾಡುತ್ತಿರಬೇಕೆಂದು ತರ್ಕಿಸದಿರಲಾಗದು.

**ಹವೆ :—**ಹಿಂದುಸ್ಥಾನದ ಯಾವ ಭಾಗಗಳಲ್ಲೂ ಮಾವಿನ ಮರಗಳು ಬೆಳೆಯುವದಿಲ್ಲ ಎಂಬಂತಿಲ್ಲ. ಆದರೂ ಸಮುದ್ರ ದಂಡೆಯ ಪ್ರದೇಶಗಳು ಅವುಗಳಿಗೆ ಅತ್ಯುತ್ತಮವಾಗಿರುತ್ತವೆನ್ನಬಹುದು. ಸಮುದ್ರದಿಂದ ಉಪ್ಪು ನೀರಿನ ಸೂಕ್ಷ್ಮ ಹನಿಗಳನ್ನು ಹೊತ್ತುಕೊಂಡು ಬೀಸುವ ಸಮಶೀತೋಷ್ಣವಾದ ಗಾಳಿಯು ಮಾವಿನ ಮರಗಳ ಪರಮ ಮಿತ್ರನಂತಿರುವದು. ಮಣ್ಣು ನೀರುಗಳೂ, ಸಾಗುವಳಿಯ ಕ್ರಮವೂ ಒಂದೇ ಆದರೂ, ಸಮುದ್ರ ದಂಡೆಗೆ ಬೆಳೆದಂತೆ ಮಾವಿನ ಮರಗಳು ಘಟ್ಟದ ಮೇಲೆ ಬೆಳೆಯುವದಿಲ್ಲ ಅವು ಒಂದೇ ಜಾತಿಯವಾದರೂ ಅವುಗಳ ಬಣ್ಣ, ರುಚಿ ಮುಂತಾದವುಗಳಲ್ಲಿ ಭೇದ ವುಂಟಾಗುತ್ತದೆ. ಆದದರಿಂದಲೇ ರತ್ನಾಗಿರಿ, ಗೋವೆ, ಕಾರವಾರ, ಅಂಕೋಲೆಗಳ ಮಾವಿನ ಹಣ್ಣುಗಳು ಹೆಸರಾಗಿರುತ್ತವೆ. ರತ್ನಾಗಿರಿಯಿಂದ ಉತ್ತಮ ಮಾವಿನ ಹಣ್ಣುಗಳು ಶಹಾಜಹಾನ ಬಾದಶಹನಿಗೆ ಕಳಿಸಲ್ಪಡುತ್ತಿದ್ದವಂತೆ! ಮಾವಿಗೆ ಬಿಸಿಲು ಎಷ್ಟು ಇದ್ದರೂ ಬರುತ್ತದೆ. ಆದರೆ ಚಳಿಯು ಬಹಳವಾದರೆ ಅದರ ಬೆಳವಣಿಗೆಯು ಕುಂದುತ್ತದೆ. ಭರ್ಫವೂ, ಹಿಮವೂ ಬೀಳುವಷ್ಟು ಚಳಿಯಾದರೆ ಮಾವಿನ ಮರಗಳಿಗೆ ಬಹಳ ಅಪಾಯವಾಗುತ್ತದೆ. ಕರ್ನಾಟಕದಲ್ಲಿ ಇಷ್ಟು ಚಳಿಯು ಎಂದೂ ಬೀಳುವದಿಲ್ಲ.

**ಮಣ್ಣು :—**ಮಾವಿನ ಮರಗಳು ಸಾಮಾನ್ಯವಾಗಿ ಎಂಥ ಮಣ್ಣಿನಲ್ಲಾದರೂ ಬೆಳೆಯತ್ತವೆ. ಆದಾಗ್ಯೂ ಎರಡು ಮೂರು ಫೂಟು ಆಳವಾದ ಮಣ್ಣು ಇದ್ದು ಅದರ ಕೆಳಗೆ ನೀರು ಬಸಿ ಹೋಗುವಂಥ ಮುರಮ್ಮವಾಗಲಿ ಉಸುಕಾಗಲಿ ಇದ್ದರೆ ಒಳ್ಳೇದು. ಉತ್ತರ ಕನ್ನಡದ ಕೆಮ್ಮಣ್ಣಿನಲ್ಲೂ, ಗುಡ್ಡಗಳ ಮರುಕಲಿನಲ್ಲೂ, ಬೆಳಗಾಂವಿ ಧಾರವಾಡಗಳ ಪಶ್ಚಿಮ ಭಾಗದ ಮಲ್ಲಾಡದಲ್ಲೂ ಇರುವ

ಸೈಲಾದ ಕೆಮ್ಮಣ್ಣಿನಲ್ಲೂ ಮಾವಿನ ಮರಗಳು ಉತ್ತಮವಾಗಿ ಬೆಳೆಯುತ್ತವೆ. ವಿಜಾಪೂರ ಜಿಲ್ಲೆಯಲ್ಲೂ ಮಾವಿನ ಮರಗಳು ಬೆಳೆಯುತ್ತವಾದರೂ, ಆಳವಾದ ಎರೆ ಮಣ್ಣಿನ ನೆಲದಲ್ಲಿ ಅವುಗಳ ಬೇರುಗಳು ಪಸರಿಸಲಿಕ್ಕೆ ಅನುಕೂಲವಾಗುವದಿಲ್ಲ. ಆದ್ದರಿಂದ ಸೈಲಾದ ಮಣ್ಣು ಇರುವ ನದಿಯ ದಂಡೆಯಲ್ಲೂ, ಹಳ್ಳ ಹರಿಗಳ ಬದಿಗಳಲ್ಲೂ ಬೆಳೆದಂತೆ ಅವು ಆಳವಾದ ಎರೆ ಮಣ್ಣಿನ ನಡು ಬೈಲಲ್ಲಿ ಬೆಳೆಯುವದಿಲ್ಲ. ಆದರೆ ತೀರ ಕಸುವಿಲ್ಲದ ಉಸುಕಿನಲ್ಲಿ ಬೆಳೆದ ಮರಗಳ ಹಣ್ಣುಗಳು ರುಚಿಯಲ್ಲಿ ಸಪ್ಪಗಿರುತ್ತವೆಂದು ತಿಳಿದು ಬಂದಿರುತ್ತದೆ. ರತ್ನಾಗಿರಿ, ಗೋವೆ, ಕಾರವಾರ ಜಿಲ್ಲೆಗಳಲ್ಲಿ ಬೈಲಲ್ಲಿ ಬೆಳೆದ ಮರಗಳಿಗಿಂತ ಗುಡ್ಡಗಳ ಮಗ್ಗುಲಲ್ಲಿ ಬೆಳೆದ ಮರಗಳ ಹಣ್ಣುಗಳ ರುಚಿಯು ಹೆಚ್ಚಿನದೆಂದು ಕಂಡುಬಂದಿರುತ್ತದೆ. ಈ ಪ್ರದೇಶಗಳ ಗುಡ್ಡಗಳ ಮೇಲೆ ಮಣ್ಣು ಆಳವಾಗಿರದಿದ್ದರೂ, ಅದರ ಕೆಳಗಿನ ಕಲ್ಲು ಮಿದುವಾಗಿರುತ್ತದೆ. ಮರಗಳ ಬೇರುಗಳು ಅದನ್ನು ಸುಲಭವಾಗಿ ಒಡಕೊಂಡು ಪಸರಿಸುತ್ತವೆ. ಆದರೆ ಕರೇ ಕಲ್ಲಿನಲ್ಲಿ ಹಾಗಾಗುವದಿಲ್ಲ. ಆದ್ದರಿಂದ ಕರೇ ಕಲ್ಲು ಸಮೀಪದಲ್ಲಿ ಮಣ್ಣಿನ ಕೆಳಗೆ ಇದ್ದರೆ, ಮರಗಳನ್ನು ಇಂಥ ಮಣ್ಣಿನಲ್ಲಿ ಬೆಳೆಸುವದು ಒಳಿತಲ್ಲ.

**ನೀರು :—**ಮಾವಿನ ಮರಗಳು ವರ್ಷಕ್ಕೆ ೨೦ ರಿಂದ ೨೦೦ ಇಂಚುಗಳವರೆಗೆ ಮಳೆಯಾಗುವ ಪ್ರದೇಶಗಳಲ್ಲೆಲ್ಲ ಚನ್ನಾಗಿ ಬೆಳೆಯುತ್ತಿರುವದನ್ನು ನೋಡಬಹುದು. ಬಾವಿಕೆರೆಗಳ ನೀರಾಗಲಿ ಕಾಲುವೆಯ ನೀರಾಗಲಿ ದೊರೆಯುತ್ತಿದ್ದರೆ, ೪೦ ಇಂಚಿಗಿಂತ ಕಡಿಮೆ ಮಳೆಯಾಗುವಲ್ಲೂ ಅವು ಉತ್ತಮವಾಗಿ ಬೆಳೆಯುತ್ತವೆ. ಆದರೂ ಮಾವಿನ ಮರಗಳು ಫಲಕ್ಕೆ ಬಂದ ಬಳಿಕ ಅವುಗಳಿಗೆ ಹೂ ಬಿಟ್ಟು ಹಣ್ಣುಗಳಾಗುವ ಕಾಲದಲ್ಲಿ ನಾಲ್ಕಾರು ತಿಂಗಳು ಮಳೆಯಿಲ್ಲದೆ ಇರಬೇಕು. ಹೂವಾಗುವಾಗ ಮಳೆಯಾದರೆ ಅವು ಉದುರಿ ಹಾನಿಯಾಗುತ್ತದೆ. ಹಾಗೇ ಕಾಯಿಗಳು ಪಾಡಾಗುವಾಗ ಗಾಳಿ, ಮಳೆ, ಆನೇಕಲ್ಲು ಮುಂತಾದವುಗಳಿಂದ ಹೇಳಲಾರದಷ್ಟು ಅಪಾಯವಾಗುತ್ತದೆ. ಸಾಮಾನ್ಯವಾಗಿ ಮಾವಿನ ಗಿಡಗಳು ಚಿಕ್ಕವಿರುವಾಗ ಇಡೀವರ್ಷ ನೀರುಕೊಟ್ಟು ಅವನ್ನು ಸಾಕಬೇಕು. ಫಲಕ್ಕೆ ಬಂದ ಬಳಿಕ ವರ್ಷಕ್ಕೆ ಮೂರು ನಾಲ್ಕು ತಿಂಗಳು ಮಳೆಯಾದರೆ ಸಾಕು. ಪ್ರತ್ಯೇಕ ನೀರು ಕೊಡಬೇಕಾಗುವದಿಲ್ಲ. ಮಾವಿನ ಮರಗಳ ಬೇರುಗಳು ಬಹಳ ಆಳವಾಗಿಯೂ ವಿಸ್ತಾರವಾಗಿಯೂ ಪಸರಿಸುವದರಿಂದ, ಬಹು ದೂರದಿಂದಲೂ ಅವು ಮಣ್ಣಿನೊಳಗಿನ ನೀರನ್ನು ಸೆಳಕೊಳ್ಳುತ್ತವೆ. ಎರಡು ವರ್ಷದ ಮಾವಿನ ಗಿಡದ ಎತ್ತರವು ಮೂರು ಫೂಟು ಇದ್ದಿದ್ದನ್ನೂ, ಅದರ ತಾಯಿ ಬೇರು ಆರು ಫೂಟುಗಳಿಗಿಂತ ಆಳವಾಗಿ ಬೆಳೆದದ್ದನ್ನೂ ನಾವು ಕಣ್ಣಾರೆ ಕಂಡಿದ್ದೇವೆ. ಆದದರಿಂದ ಮಾವಿನ ಮರ

ಗಳು ಸ್ವಾಭಾವಿಕವಾಗಿ ಬೀಳುವ ಮಳೆಯನ್ನು ಅವಲಂಬಿಸಿ ಬೆಳೆಯುವದು ಆಶ್ಚರ್ಯವಲ್ಲ. ಆದರೂ, ಕಸುವಿಲ್ಲದ ಉಸುಕು ಮಣ್ಣಿನಲ್ಲೂ, ಬಹಳ ನೈಲಾಗಿ ನೀರು ಹಿಡಿಯುವ ಪ್ರೊಳ್ಳು ಮಣ್ಣಿನಲ್ಲೂ ಯೋಗ್ಯ ಕಾಲದಲ್ಲಿ ನೀರು ಕೊಡುವ ವ್ಯವಸ್ಥೆ ಮಾಡಿದರೆ, ಮಾವಿನ ಮರಗಳಿಂದ ಹೆಚ್ಚಿನ ಉತ್ಪನ್ನವು ಬರಬಹುದು. ಈ ವಿಷಯದಲ್ಲಿ ಇನ್ನೂ ಸಾಕಷ್ಟು ಪ್ರಯೋಗಗಳಾಗಿಲ್ಲ.

**ಸಸಿಗಳು :—** ಮಾವಿನ ಹಣ್ಣುಗಳು ಚೈತ್ರ ವೈಶಾಖ ಜ್ಯೇಷ್ಠ ಮಾಸಗಳಲ್ಲಿ ತಯಾರಾಗುತ್ತವೆ. ಈ ಹಣ್ಣುಗಳಿಂದ ಗೊರಟೆ (ಬೀಜ)ಗಳನ್ನು ತೆಗೆದು ಮಳೆಗಾಲದ ಆರಂಭದಲ್ಲಿ ನೆಡುತ್ತಾರೆ. ಸಸಿಗಳ ಬೇರುಗಳು ಸರಿಯಾಗಿ ವಸರಿಸಿ ಬೆಳೆಯಬೇಕಾದರೆ, ಮರಗಳನ್ನು ಎಲ್ಲಿ ಬೆಳೆಸಬೇಕಾಗಿದೆಯೋ, ಅಲ್ಲೇ ಗೊರಟೆಗಳನ್ನು ನೆಟ್ಟು ಸಸಿಗಳನ್ನು ಬೆಳೆಸುವದು ಉತ್ತಮ. ಮುಂದೆ ಅವು ದೊಡ್ಡವಾದ ಬಳಿಕ ಅವುಗಳ ಮೇಲೆ ಕೊಡಿ ಕಟ್ಟಿಕೊಳ್ಳಬಹುದು. ಯಾಕೆಂದರೆ ಮಾವಿನ ಗೊರಟೆಗಳನ್ನು ನೆಟ್ಟರೆ, ಅವುಗಳಿಂದಾಗುವ ಮರಗಳು ಅದೇ ಜಾತಿಯ ಅಷ್ಟೇ ಉತ್ತಮ ಹಣ್ಣುಗಳನ್ನು ಕೊಡುವದಿಲ್ಲ. ಆದ್ದರಿಂದ ಕೊಡಿ ಕಟ್ಟಿ ಬೇಕಾದ ಜಾತಿಯ ಮರಗಳನ್ನು ದೊರಕಿಸಿಕೊಳ್ಳಬೇಕಾದರೆ, ಮೊದಲು ಹುಳಿ (ಊರ) ಮಾವಿನ ಜಾತಿಯ ಗೊರಟೆಗಳಿಂದ ಸಸಿಗಳನ್ನು ತಯಾರಿಸಿಕೊಳ್ಳಬೇಕು. ಸೀ ಮಾವಿನ ಹಣ್ಣಿನ ಗೊರಟೆಯಿಂದಾಗುವ ಸಸಿಗಳಿಗಿಂತ ಹುಳಿ ಮಾವಿನ ಗೊರಟೆಯಿಂದಾಗುವ ಸಸಿಗಳು ಬಲವುಳ್ಳವೂ, ಜೋರಿನಿಂದ ಬೆಳೆಯುವಂಥವೂ ಇರುತ್ತವೆಂದು ತಿಳಿದು ಬಂದಿದೆ. ಇಂಥ ಸಸಿಗಳನ್ನು ಬೊಡ್ಡೆಗಾಗಿ ಉಪಯೋಗಿಸಿದರೆ, ಮುಂದಾಗುವ ಮರಕ್ಕೆ ಒಳ್ಳೇ ಪಾಯವು ದೊರೆತಂತಾಗುತ್ತದೆ. ನೆಡಲಿಕ್ಕೆ ಚಪ್ಪಟೆಯಾಗಿರದೆ ಉಬ್ಬಿದ ಮತ್ತು ಭಾರವಾದ ಗೊರಟೆಗಳನ್ನು ಆರಿಸಬೇಕು. ಒಂದೊಂದು ಕುಣಿಯಲ್ಲಿ ನಾಲ್ಕೈದು ಗೊರಟೆಗಳನ್ನು ನಟ್ಟು, ಸಸಿಗಳು ಹುಟ್ಟಿದ ಬಳಿಕ ಎಲ್ಲಕ್ಕೂ ಬಲಿಷ್ಠವಾದ ಸಸಿಯೊಂದನ್ನೇ ಇಟ್ಟು, ಉಳಿದವುಗಳನ್ನು ನೆಲಕ್ಕೆ ಹತ್ತಿ ಕತ್ತರಿಸಿ ಹಾಕಬೇಕು. ಎಳೆದು ಕೀಳ ಬಾರದು. ಕಿತ್ತರೆ ನಮಗೆ ಬೇಕಾದ ಸಸಿಗೂ ಅಪಾಯವಾಗ ಬಹುದು. ಈ ಸಸಿಯನ್ನು ನೀರು, ಗೊಬ್ಬರ, ಮಣ್ಣು ಕೆದರುವದು ಮುಂತಾದವುಗಳನ್ನು ಹೊತ್ತು ಹೊತ್ತಿಗೆ ಒದಗಿಸಿಕೊಟ್ಟು ಸಾಕಿದರೆ, ಒಂದು ವರ್ಷದಲ್ಲಿ ಅದರ ಮೇಲೆ ಕೊಡಿಕಟ್ಟ ಬಹುದು.

ಮರಗಳನ್ನು ಬೆಳಿಸ ಬೇಕಾದಲ್ಲಿ ಬೊಡ್ಡೆಯ ಸಸಿಗಳನ್ನು ಬೆಳೆಸುವದು ಉತ್ತಮ ರೀತಿಯು. ಆದರೆ ಅದು ಬಹಳ ಶ್ರಮದ್ದೂ ಖರ್ಚಿನದೂ ಆಗಿರುತ್ತದೆ. ಆದ ಕಾರಣ ಗೊರಟೆಗಳನ್ನು ಸಣ್ಣ ಚೋರಿಗೆಗಳಲ್ಲಿ ನೆಟ್ಟು, ಅವು ದೊಡ್ಡವಾದ ಬಳಿಕ ಕೊಡಿಕಟ್ಟಿ ತಯಾರಾದ ಗಿಡಗಳನ್ನು ಹೊಲದಲ್ಲಿ ನೆಡುತ್ತಾರೆ. ಇದರಿಂದ



(*a*) ನೆಲದಲ್ಲಿ ಬೆಳೆದ ಮಾವಿನ ಸಸಿಯು. (*b*) ಚೋರಿಯಲ್ಲಿ ಬೆಳೆದ ಮಾವಿನ ಸಸಿಯ

(*Courtesy: Bom. Dept. Agri.*)

(*To face page No. 60*)

ಸಾವಿರಗಟ್ಲೆ ಸಸಿಗಳನ್ನು ತೋಟದಲ್ಲಿ ಒತ್ತಟ್ಟಿಗೆ ಬೆಳೆಸಿಕೊಂಡು ಅಲ್ಪ ಶ್ರಮದಿಂದಲೂ ಅಲ್ಪ ವ್ಯಯದಿಂದಲೂ ಕೊಡಿಕಟ್ಟಿ ತಯಾರಿಸಿಕೊಳ್ಳಬಹುದು. ಅವುಗಳಿಗೆ ನೀರು ಹಾಕುವದೂ, ಮಣ್ಣು ಕೆದರುವದೂ, ಕೊಡಿ ಕಟ್ಟುವದೂ ಸುಲಭವಾಗುತ್ತದೆ. ಆದರೆ ಗಿಡಗಳ ಬೇರುಗಳು ಚೋರಿಗಳ ಸಣ್ಣ ಆಯದಲ್ಲಿ ಮುದುಡಿಕೊಳ್ಳ ಬೇಕಾಗುವದರಿಂದ ಅವು ಸರಿಯಾಗಿ ಬೆಳೆಯುವದಿಲ್ಲ ಮೇಲಿನ ಸಸಿಗಳೂ ಕುಂದುತ್ತವೆ. ಆದ್ದರಿಂದ ಆದಷ್ಟು ಸ್ವಲ್ಪ ಕಾಲದಲ್ಲಿ ಸಸಿಗಳಿಗೆ ಕೊಡಿಕಟ್ಟಿ ಹೊಲದಲ್ಲಿ ನೆಡುವದು ಉತ್ತಮ.

ಸಾಮಾನ್ಯವಾಗಿ ಒಳ್ಳೇ ಜಾತಿಯ ಮಾವಿನ ಗಿಡಗಳನ್ನು ಚೋರಿಗಳಲ್ಲಿ ಬೆಳೆಸಿದ ಬೊಡ್ಡೆಯ ಸಸಿಗಳ ಮೇಲೆ ಕೊಡಿಕಟ್ಟಿ ತಯಾರಿಸಿಕೊಳ್ಳುತ್ತಾರೆ. ಚೋರಿಗಳಲ್ಲಿ ೩೨ ನೇ ಪಾನಿನಲ್ಲಿ ಹೇಳಿದಂತೆ ಮಣ್ಣು ಗೊಬ್ಬರಗಳ ಮಿಶ್ರಣವನ್ನು ತುಂಬಿ, ಒಂದೊಂದು ಚೋರಿಯಲ್ಲಿ ಎರಡೆರಡರಂತೆ ಗೊರಟೆಗಳನ್ನು ನೆಟ್ಟು, ಸಸಿಗಳು ಹುಟ್ಟಿದ ಬಳಿಕ ಬಲಿಷ್ಠವಾದದ್ದೊಂದನ್ನು ಬಿಟ್ಟು, ಇನ್ನೊಂದನ್ನು ಮಣ್ಣಿಗೆ ಹತ್ತಿ ಕತ್ತರಿಸಿಬಿಡುತ್ತಾರೆ. ಗೊರಟೆಗಳನ್ನು ಚೋರಿಯ ಅಂಚಿಗೆ ಹತ್ತಿ ನೆಡುವದು ಒಳ್ಳೇದು. ಇದರಿಂದ ಮುಂದೆ ಕೊಡಿಕಟ್ಟುವದು ಸುಲಭವಾಗುತ್ತದೆ. ಚೋರಿಗಳಿಗೆ ದಿನಾಲು ಝಾರಿಯಿಂದ ನೀರು ಹನಿಸಬೇಕು. ಎಂಟು ದಿನಗಳಿಗೊಮ್ಮೆ ಆದರೂ ಮಣ್ಣುಕೆದರಿ ನೈಲು ಮಾಡಬೇಕು. ಇಲ್ಲವಾದರೆ ಅದು ಬಿರುಸಾಗಿ ಸಸಿಗಳ ಬೇರುಗಳಿಗೆ ಅವಶ್ಯವಿದ್ದ ಹವೆಯು ದೊರೆಯುವದಿಲ್ಲ. ಚೋರಿಯೊಳಗಿನ ಮಣ್ಣು ನೀರಿನ ಕೂಡ ಹರಿದು ಹೋಗಬಾರದೆಂದೂ, ಅದರೊಳಗಿನ ಹಸಿಯು ಆರಬಾರದೆಂದೂ, ಅವರ ಮೇಲೆ ತುಸು ಒಣಗಿದ ತರಗೆಲೆಗಳನ್ನು ಹಾಕುವದು ಒಳ್ಳೇದು. ತಿಂಗಳಿಗೊಮ್ಮೆ ಚೋರಿಯೊಂದಕ್ಕೆ ಹತ್ತು ತೊಲೆ ಗೊಬ್ಬರದ ನೀರನ್ನು ಹಾಕುವದರಿಂದ ಸಸಿಗಳು ಜೋರಿನಿಂದ ಬೆಳೆಯುವವು. ಗೊಬ್ಬರದ ನೀರನ್ನು ಕೆಳಗಿನಂತೆ ಮಾಡಿಕೊಳ್ಳಬಹುದು :—

(೧) ಒಂದು ಬಾಲದಿ ನೀರಿನಲ್ಲಿ ಒಂದು ಹಿಡಿ ಸಲ್ಫೇಟ ಆಫ್ ಎಮೋನಿಯಾ ಎಂಬ ಉಪ್ಪನ್ನು ಕರಗಿಸಿ,

ಅಥವಾ

(೨) ಒಂದು ಬಾಲದಿಯಲ್ಲಿ ಅರ್ಧ ನೀರು ಅರ್ಧ ಗೋಮೂತ್ರ ಇವುಗಳನ್ನು ಬೆರಿಸಿ,

ಅಥವಾ

(೩) ಒಂದು ಬಾಲದಿ ನೀರಿನಲ್ಲಿ ಒಂದು ಸೇರು ಸಗಣಿಯನ್ನು ಕದಡಿ.

ಈ ಪ್ರಮಾಣಗಳಲ್ಲಿ ಅನುಕೂಲವೂ ಸುಲಭವೂ ಆದ ಯಾವದೇ ಒಂದು ರೀತಿಯಿಂದ ಅವಶ್ಯವಿದ್ದಷ್ಟು ಗೊಬ್ಬರದ ನೀರನ್ನು ಮಾಡಿಕೊಂಡು, ಸಣ್ಣದೊಂದು ಬಟ್ಟಲದಿಂದಾಗಲಿ ಪಚ್ಛೆಯಿಂದಾಗಲಿ ಆಳತೆಯಂತೆ ಚೋರೆಗಳಲ್ಲಿ ಸುರುವುತ್ತ ಹೋದರಾಯಿತು. ಗೊಬ್ಬರದ ನೀರನ್ನು ಹಾಕಿದ ದಿನ ಪ್ರತ್ಯೇಕ ನೀರು ಹನಿಸುವದು ಬೇಡ. ಮಾರನೇ ದಿನ ಮಣ್ಣು ಕೆದರಿ ನೀರು ಹನಿಸಬೇಕು. ಚೋರೆಯೊಳಗಿನ ಮಣ್ಣು ದಿನಾಲು ನೀರು ಹಾಕುವದರಿಂದ ಹರಿದು ಹೋಗಿ ಕಡಿಮೆಯಾದರೆ, ಗೊಬ್ಬರ ಮಣ್ಣುಗಳ ಮಿಶ್ರಣದಿಂದ ಆಗಾಗ್ಗೆ ಅದನ್ನು ತುಂಬಿ ಕೊಳ್ಳಬೇಕು.

ಚೋರೆಗಳನ್ನು ತಿಂಗಳಿಗೊಮ್ಮೆ ನೆಲದಿಂದ ಎತ್ತಿ ಅಲ್ಲೇ ಸಮೀಪದಲ್ಲಿ ಇನ್ನೊಂದು ಸ್ಥಳದಲ್ಲಿ ಇಡಬೇಕು. ಯಾಕಂದರೆ ಒಂದೇ ಸ್ಥಳದಲ್ಲಿ ಅವು ಬಹಳ ಕಾಲ ಇದ್ದರೆ ಅವುಗಳ ಬುಡಕ್ಕಿರುವ ತೂತಿನೊಳಗಿಂದ ಬೇರುಗಳು ಹೊರಬಿದ್ದು ನೆಲದೊಳಕ್ಕೆ ಸೇರುತ್ತವೆ. ಮುಂದೆ ಅವು ಅಲ್ಲೇ ಭದ್ರವಾಗಿ ಊರಿ ಬಲಿತ ಬಳಿಕ, ಚೋರೆಗಳನ್ನು ಎತ್ತುವಾಗ ಹರಿದು ಅಪಾಯ ಹೊಂದುತ್ತವೆ. ಇದರ ಪರಿಣಾಮವೆಂದು ಸಸಿಗಳು ಸಾಯಬಹುದು ಹೀಗಾಗಬಾರದೆಂದು ಮೊದಲೇ ಬೇರುಗಳು ನೆಲದಲ್ಲಿ ಊರದಂತೆ ಎಚ್ಚರ ಪಡುವದು ಒಳ್ಳೇದು.

ಸಸಿಗಳ ಬೊಡ್ಡೆಯು ಬಲವುಳ್ಳದ್ದಾಗಿ ಜೋರಿನಿಂದ ಬೆಳೆಯಲಿಕ್ಕೆ ಅದರ ಮೇಲೆ ಮೂಡುವ ಅಡ್ಡ ಚಿಗುರುಗಳನ್ನು ಚಿವುಟಿ ಹಾಕ ಬೇಕು. ಇಲ್ಲವಾದರೆ ಅಡ್ಡ ಚಿಗುರುಗಳು ಬೇರುಗಳು ಸೇದಿಕೊಂಡ ಅನ್ನವನ್ನು ಸೆಳಕೊಳ್ಳುವದರಿಂದ ನಡುವಿನ ಬೊಡ್ಡೆಗೆ ಸಾಕಷ್ಟು ಜೋರು ಬರುವದಿಲ್ಲ. ಮಾವಿನ ಸಸಿಗಳೂ ಸಾಮಾನ್ಯವಾಗಿ ವರ್ಷಕ್ಕೆ ಮೂರು ಸಾರೆ ಚಿಗುರುತ್ತವೆ. ಪ್ರತಿ ಒಂದು ಸಾರೆ ಚಿಗುರುವಾಗ ಹಳೆ ಬೊಡ್ಡೆಯ ತುದಿಯಿಂದ ಅನೇಕ ಚಿಗುರುಗಳು ಮೂಡಬಹುದು. ಇವುಗಳಲ್ಲಿ ಬಲಿಷ್ಠವಾದದ್ದೊಂದನ್ನು ಮಾತ್ರ ಬಿಟ್ಟು ಉಳಿದವುಗಳನ್ನು ಚಿವುಟಿ ಹಾಕಬೇಕು.

ಮಾವಿನ ಜಾತಿಗಳಲ್ಲಿ ಏಕಾಂಕುರಿ, ಅನೇಕಾಂಕುರಿ ಎಂಬ ಎರಡು ದೊಡ್ಡ ವಿಭಾಗಗಳನ್ನು ಮಾಡಬಹುದು. ಏಕಾಂಕುರಿ ಜಾತಿಗಳ ಗೊರಟೆಗಳನ್ನು ನೆಟ್ಟರೆ ಒಂದೇ ಸಸಿಯು ಹುಟ್ಟುವದು ಅನೇಕಾಂಕುರಿ ಜಾತಿಗಳ ಬೀಜಗಳನ್ನು ನೆಟ್ಟರೆ ಒಂದಕ್ಕಿಂತ ಹೆಚ್ಚು ಸಸಿಗಳು ಒಂದೇ ಗೊರಟೆಯಿಂದ ಹುಟ್ಟುವವು. ಹಿಂದುಸ್ಥಾನದೊಳಗಿನ ಜಾತಿಗಳೆಲ್ಲ ಏಕಾಂಕುರೀ ಜಾತಿಗಳಿರುತ್ತವೆ. ಆದ ಕಾರಣ ಒಂದೇ ಗೊರಟೆಯ ಸಸಿಗಳು ಹುಟ್ಟಿದ ಬಳಿಕ ಅವುಗಳಲ್ಲಿ ಬಲವಾದದ್ದೊಂದು ಬಿಟ್ಟು ಉಳಿದವುಗಳನ್ನು ಚಿವುಟಿ ಹಾಕುವ ಪ್ರಸಂಗವು ಈ ದೇಶದಲ್ಲಿ ಬರುವದಿಲ್ಲ.

ಆದರೂ ಏಕಾಂಕುರೀ ಗೊರಟೆಯಿಂದ ಒಮ್ಮೊಮ್ಮೆ ಎರಡು ಮೂರು ಸಸಿಗಳು ಮಣ್ಣಿನ ಮೇಲಕ್ಕೆ ಹುಟ್ಟಿ ಬಂದಂತೆ ಕಾಣುತ್ತದೆ. ಇವು ಎರಡು ಮೂರು ಬೇರೆ ಬೇರೆ ಸಸಿಗಳಲ್ಲ. ಒಂದೇ ಸಸಿಯ ಟೊಂಗೆಗಳು. ಅವು ನೆಲದೊಳಕ್ಕೇ ಒಡೆದು ಮೇಲೆ ಬೇರೆ ಬೇರೆಯಾಗಿ ಕಾಣಿಸಿಕೊಂಡಂಥವು. ಇವುಗಳಲ್ಲಿ ನಡುವಿನ ಬಲವಾದದ್ದೊಂದನ್ನು ಬಿಟ್ಟು ಉಳಿದವುಗಳನ್ನು ಮಣ್ಣಿಗೆ ಹತ್ತಿ ಕತ್ತರಿಸಿ ಹಾಕ ಬೇಕು. ಮುಖ್ಯಾಂಶವೇನಂದರೆ, ಒಂದು ಚೋರೆಯಲ್ಲಿ ಒಂದೇ ಸಸಿಯು ನೀಟಾಗಿ ಬೆಳೆದಿರಬೇಕು. ಅದು ಆದಷ್ಟು ಬಲಿಷ್ಠವಾದದ್ದೂ ತೀವ್ರ ಬೆಳೆಯು ವಂಥದೂ ಆಗಿರಬೇಕು. ಸಸಿಯ ಮೇಲೆ ಮುಂದಿನ ಕೊಡಿಕಟ್ಟಿ ತಯಾರಿಸಿದ ಮರದ ಕಸುವೂ ಫಲ ಹಿಡಿಯುವ ಶಕ್ತಿಯೂ ಅವಲಂಬಿಸುರುತ್ತವೆ. ಆದದ ರಿಂದ ಇದು ಬಲವಾದದ್ದಿರಬೇಕೆಂದು ಆದಷ್ಟು ಪ್ರಯತ್ನ ಮಾಡಬೇಕು.

ಗೊರಟೆಗಳನ್ನು ನೆಟ್ಟು ನಾಲ್ಕೈದು ತಿಂಗಳುಗಳಲ್ಲಿ ಸಸಿಗಳು ಸುಮಾರು ಒಂದು ಫೂಟು ಎತ್ತರವಾಗುತ್ತವೆ. ಅವುಗಳ ಬೇರುಗಳು ಚೋರೆಯೊಳಗಿನ ಮಣ್ಣಿನ ಸ್ಥಳವನ್ನೆಲ್ಲ ವ್ಯಾಪಿಸಿಕೊಂಡು ಮುದುಡಿಕೊಳ್ಳಲಾರಂಭಿಸುತ್ತವೆ. ಚೋ ರೆಯ ತೂತಿನೊಳಗಿಂದ ಹೊರಬೀಳಲು ಯತ್ನಿಸುತ್ತವೆ. ಹೊರಬೀಳಗೊಟ್ಟರೆ ಅವು ನೆಲದಲ್ಲಿ ಊರಿ, ಮುಂದೆ ಚೋರೆಯನ್ನು ಎತ್ತುವಾಗ ಅಪಾಯಕ್ಕೆ ಕಾರಣ ವಾಗುತ್ತವೆ. ಹೊರಗೆ ಬರಗೊಡದಿದ್ದರೆ ಒಳಗೆ ಸಾಕಷ್ಟು ಸ್ಥಳವಿಲ್ಲದಿರುವದರಿಂದ ಸಸಿಗಳ ಬೆಳವಣಿಗೆಯು ಕುಂದುತ್ತದೆ. ಇವೆರಡನ್ನೂ ತಪ್ಪಿಸಿಕೊಳ್ಳಲು ಒಂದು ಸುಲಭವಾದ ಉಪಾಯವಿದೆ. ಅದೇನಂದರೆ, ಗೊರಟೆಯನ್ನು ನೆಟ್ಟು ಸಸಿಯನ್ನು ತಯಾರಿಸಿದ ಚೋರೆಯನ್ನು, ಇನ್ನೊಂದು ಅದಕ್ಕೂ ದೊಡ್ಡ ಚೋರೆಯಲ್ಲಿ ಇಡ ಬೇಕು. ಈ ದೊಡ್ಡ ಚೋರೆಯ ಬುಡದಲ್ಲಿ ಒಣಗಿದ ತರಗೆಲೆಗಳನ್ನು ಎರಡು ಮೂರು ಇಂಚು ದಪ್ಪವಾದ ಥರದಲ್ಲಿ ಹಾಕಬೇಕು. ಅದರ ಮೇಲೆ ಸಸಿಯ ಚೋರೆಯನ್ನು ಇಟ್ಟು ಅದರ ಸುತ್ತಲೂ ತರಗೆಲೆಗಳನ್ನು ದೊಡ್ಡ ಚೋರೆಯೊಳಕ್ಕೆ ತುರುಕಬೇಕು. ಹೀಗೆ ಮಾಡಿಟ್ಟರೆ ಸಸಿಯ ಬೇರುಗಳು ಸಣ್ಣ ಚೋರೆಯಿಂದ ಹೊರಬಿದ್ದರೂ ದೊಡ್ಡ ಚೋರೆಯಿಂದ ಹೊರಬೀಳುವದಿಲ್ಲ. ಮತ್ತು ಮುಂದೆ ನಾಲ್ಕಾರು ತಿಂಗಳುಗಳ ವರೆಗೆ ಸಸಿಗಳ ಬೆಳವಣಿಗೆಯು ಬಹಳ ಕುಂದುವದಿಲ್ಲ. ಮತ್ತು ಕೊಡಿಕಟ್ಟಿಕೊಂಡು ಗಿಡವನ್ನು ಹೊಲದಲ್ಲಿ ನೆಡುವ ವರೆಗೆ ಹೆಚ್ಚಿನ ಆತಂಕ ವಿರುವದಿಲ್ಲ. ಇಷ್ಟೆಲ್ಲ ಮಾಡಿದರೂ, ನೆಲದಲ್ಲೇ ಗೊರಟೆಯನ್ನು ನೆಟ್ಟು ಬೆಳೆಸಿದ ಸಸಿಯು ಬೆಳೆದಂತೆ ಚೋರೆಯ ಸಸಿಯು ಬೆಳೆಯಲಾರದು ಎಂಬದನ್ನು ಮರೆಯುವಂತಿಲ್ಲ.

**ಕೊಡಿ ಕಟ್ಟುವದು :**—ಹೀಗೆ ಬೆಳೆಸಿಕೊಂಡ ಸಸಿಗಳು ಸುಮಾರು ಒಂದು ವರ್ಷದಲ್ಲಿ ಕೊಡಿಕಟ್ಟಲಿಕ್ಕೆ ತಯಾರಾಗುತ್ತವೆ. ಅವುಗಳನ್ನು ಒಳ್ಳೇ

ಜಾತಿಯ ಮರದ ಸಮೀಪ ತಂದು, ಒಳ್ಳೇ ಕೊಡಿಗಳನ್ನು ಆರಿಸಿ ಭೆಟ್ಟಿ ಕೊಡಿಯ ಪದ್ಧತಿಯಿಂದ ಕಟ್ಟುತ್ತಾರೆ. ಇದರ ಸವಿಸ್ತರ ಮಾಹಿತಿಯನ್ನು ೩೭-೪೦ ಪಾನುಗಳಲ್ಲಿ ಕೊಟ್ಟಿದ್ದೇವೆ

ರತ್ನಾಗಿರಿಯು ಕಡೆಗೆ ಒಂದೇ ಚೋರೆಯಲ್ಲಿ ಒಂದೊಕ್ಕೊಂದರ ಸಮೀಪ ಎರಡು ಮೂರು ಸಸಿಗಳನ್ನು ಬೆಳೆಸಿಕೊಂಡು, ಅವೆಲ್ಲವುಗಳನ್ನು ದೊಡ್ಡ ಆಕಾರದ ಒಂದೇ ಕೊಡಿಗೆ ಜೋಡಿಸುತ್ತಾರೆ. ಇದರಿಂದ ಕೊಡಿ ಕಟ್ಟುವವರಿಗೆ ಒಮ್ಮೆಲೇ ದೊಡ್ಡ ಆಕಾರದ ಗಿಡವು ಮಾರಲಿಕ್ಕೆ ಸಿಗುತ್ತದೆ. ಹೆಚ್ಚು ಬೆಲೆಯು ಬರುತ್ತದೆ. ಒಂದೇ ಸಸಿಯ ಮೇಲೆ ದೊಡ್ಡ ಕೊಡಿಯ ಟೊಂಗೆಯನ್ನು ಕಟ್ಟಿದರೆ ಅದರಿಂದ ಕೊಡಿಯ ಭಾರವನ್ನು ಹೊರುವದಾಗುವದಿಲ್ಲ ಕೊಡಿಯು ಮುರಿಯುತ್ತದೆ. ಆದ್ದರಿಂದ ಎರಡು ಮೂರು ಸಸಿಗಳನ್ನು ಒಂದೇ ಟೊಂಗೆಗೆ ಉಪಯೋಗಿಸುತ್ತಾರೆ. ಈ ಪದ್ಧತಿಯು ತೀರ ತಪ್ಪು. ಇದರಿಂದ ಕೊಡಿಕಟ್ಟಿದ ಮಾವಿನ ಗಿಡಗಳನ್ನು ಮಾರುವವರಿಗೆ ಲಾಭವಾಗುತ್ತದೆಂಬದು ಹೌದು. ಆದರೆ ಗಿಡಗಳನ್ನು ನೆಟ್ಟು ಬಳೆಸಿ ಹಣ್ಣು ತಿನ್ನಬೇಕೆನ್ನುವ ತೋಟಿಗರಿಗೆ ಹಾನಿಯಾಗುತ್ತದೆ. ಯಾಕೆಂದರೆ ಮೂರು ಸಸಿಗಳು ಒಂದೇ ಬೊಡ್ಡೆಯಾಗಿ ಮುಂದ ಬೆಳೆಯಲಾರವು. ಅವುಗಳ ಜೋರಿನಲ್ಲಿ ಹೆಚ್ಚು ಕಡಿಮೆಯಿರುವದು. ಮೂರು ಸಸಿಗಳನ್ನು ಒಂದೇ ಟೊಂಗೆಗೆ ಜೋಡಿಸಿದ ಬಳಿಕ, ಮೂರು ಸಂದುಗಳುಂಟಾಗಿ, ಗಿಡವು ಕೆಲ ಕಾಲದ ವರೆಗಾದರೂ ಮುರಿದು ಬೀಳುವ ಸಂಭವವಿರುವದು. ಬೊಡ್ಡೆಯೂ ಕೊಡಿಯೂ ಕೂಡಿ ಮುಂದೆ ಒಂದೇ ಮರವಾಗಿ ಬೆಳೆಯಬೇಕಾದ್ದರಿಂದ, ಒಂದೇ ಬೊಡ್ಡೆಯ ಸಸಿಯ ಮೇಲೆ ಅದರಷ್ಟೇ ಗಡುತರವಾದ ಕೊಡಿಯನ್ನು ಕಟ್ಟಿ ಬೆಳೆಸುವದು ಅತ್ಯುತ್ತಮವಾಗಿರುತ್ತದೆ.

ಕೊಡಿ ಕಟ್ಟುವಾಗ ಬೊಡ್ಡೆಯೂ ಕೊಡಿಯೂ ತುಸು ಬಲಿತಿರಬೇಕೆಂದು ತಜ್ಞರ ಅಭಿಪ್ರಾಯವಿದೆ. ಅವು ಒಂದು ವರ್ಷದವಾದರೂ ಇರಬೇಕೆಂದು ಅನ್ನುತ್ತಾರೆ. ತೊಗಟೆಯು ಹಸುರು ಬಣ್ಣದ್ದಿದ್ದಾಗ ಬೊಡ್ಡೆಯನ್ನೂ ಕೊಡಿಯನ್ನೂ ಜೋಡಿಸುವದು ಸಾಧ್ಯವು. ಆದರೆ ಬಹಳ ಎಳೆ ಕೊಡಿಗಳು ಕಟ್ಟುವಾಗ ಮುರಿಯಬಹುದು. ಆದ್ದರಿಂದ ಬಲಿತ ಕೊಡಿಗಳನ್ನೇ ಕಟ್ಟಲಿಕ್ಕೆ ಉಪಯೋಗಿಸುತ್ತಾರೆ. ಮತ್ತು ಬಹಳ ಬಲಿತು ಬಿರುಸಾದ ಕೊಡಿಗಳನ್ನು ಕಟ್ಟುವದು ಸಾಧ್ಯವಾದರೂ ಸುಲಭವಲ್ಲ. ಬೊಡ್ಡೆಯೂ ಕೊಡಿಯೂ ಕಿರುಬೆರಳಿನಷ್ಟು ಗಡುತರವಾದಾಗ ಅವನ್ನು ಜೋಡಿಸುವದು ಉತ್ತಮ.

**ಕಣ್ಣು ಹಚ್ಚುವದು :—**ಉತ್ತಮ ಜಾತಿಯ ಮಾವಿನ ಗಿಡಗಳನ್ನು ಕೊಡಿಕಟ್ಟಿ ತಯಾರಿಸುವದು ಹಳೆಯದು. ಅವುಗಳ ಅಭಿವೃದ್ಧಿಯನ್ನು ಕೊಂಬೆ,



ನೆಲದಲ್ಲೇ ಬೆಳೆಸಿ ಕೊಡಿಕಟ್ಟಿಕೊಂಡ ಉತ್ತಮ ಮಾವಿನ ಗಿಡವು.

(Courtesy. Bom. Dept. Agri.) (To face page No 64)

ಮರಿ, ಗೂಟಿ ಮುಂತಾದವುಗಳಿಂದ ಸಾಧಿಸಬೇಕೆಂದು ಮಾಡಿದ ಪ್ರಯತ್ನಗಳಿಗೆ ಯಶಸ್ಸು ದೊರೆಯಲಿಲ್ಲ. ಮಾವಿನ ಟೊಂಗೆಗಳಿಗೆ ನೋವಾದರೆ ಒಂದು ತರದ ಅಂಟಿನಂಥ ದಪ್ಪನ್ನ ರಸವು ಹೊರಬರುತ್ತದಷ್ಟೇ. ಈ ರಸವು ಹವೆಗೆ ತಾಗಿ ಘಟ್ಟಿಯಾಗುತ್ತದೆ. ಇದರಿಂದಲೇ ಮಾವಿನ ಟೊಂಗೆಗಳಿಗೆ ಬೇರುಗಳು ಮೂಡಲು ಆತಂಕವಾಗುತ್ತದೆಂದು ಅಭಿಪ್ರಾಯವಿದೆ. ಕೊಡಿ ಕಟ್ಟುವದರಲ್ಲೂ ಕಣ್ಣು ಹಚ್ಚುವದರಲ್ಲೂ ಈ ರಸವು ಹೊರಬೀಳುವದಕ್ಕೆ ಆಸ್ಪದ ಕೊಡದೆ ಬೊಡ್ಡೆ-ಕೊಡಿಗಳೆರಡನ್ನೂ ತತ್‌ಕ್ಷಣ ಜೋಡಿಸುವದು ಮುಖ್ಯವಾದದ್ದು.

ಮಾವಿನ ಗಿಡಗಳನ್ನು ಕಣ್ಣು ಹಚ್ಚಿ ಅಭಿವೃದ್ಧಿ ಮಾಡಲು ಬಹಳ ಪ್ರಯತ್ನವು ನಡೆದಿದೆ. ಢಾಲು ಕಣ್ಣಿನ ರೀತಿಯಿಂದ ಕಣ್ಣುಗಳನ್ನು ಹಚ್ಚಿದರೆ ನೂರಕ್ಕೆ ನಾಲ್ವತ್ತರಷ್ಟು ಕಣ್ಣುಗಳು ಚಿಗಿಯುವವೆಂದು ಈ ವೊದಲು ಆದ ಪ್ರಯತ್ನಗಳಿಂದ ಅನುಭವಕ್ಕೆ ಬಂದಿದೆ. ಮಾವಿನ ಕಣ್ಣುಗಳನ್ನು ಹಚ್ಚಲಿಕ್ಕೆ ಬೊಡ್ಡೆಯ ಸಸಿಗಳನ್ನು ಚೋರೆಯಲ್ಲೇ ಒಂದು ವರ್ಷದವಾಗುವ ವರೆಗೆ ಬೆಳೆಸುತ್ತಾರೆ. ನೆಲದಲ್ಲಿ ಬೆಳೆಸುವದಿಲ್ಲ. ಯಾಕಂದರೆ ಮಾವಿನ ಗಿಡಗಳ ಬೇರುಗಳು ಬಹಳ ಆಳವಾಗಿ ಹೋಗುವದರಿಂದ, ಮುಂದೆ ಅವನ್ನು ಕೀಳುವಾಗ ಅವು ಹರಿಯುತ್ತವೆ. ನಡುವಿನ ತಾಯಿ ಬೇರು ಹರಿದರೆ ಗಿಡಗಳು ಸಾಯುವ ಸಂಭವವಿರುತ್ತದೆ. ಕಣ್ಣು ಹಚ್ಚುವದಕ್ಕೆ ಮೂರು ಋತುಗಳ ಪೂರ್ವದಲ್ಲಿ ಚಿಗಿತು ಬಲಿತ ಟೊಂಗೆಗಳ ಮೇಲಿನ ಕಣ್ಣುಗಳನ್ನು ಆರಿಸುತ್ತಾರೆ ಅವು ದೊಡ್ಡವಾಗಿ ಉಬ್ಬಿರಬೇಕು. ಒಡೆದಿರಬಾರದು. ಉಬ್ಬಿದ ಕಣ್ಣುಗಳು ದೊರೆಯದಿದ್ದರೆ ಮೂಕ ಕಣ್ಣುಗಳುಳ್ಳ ಟೊಂಗೆಯನ್ನು ಆರಿಸಿ ಅದರ ತುದಿಯನ್ನು ಕತ್ತರಿಸಿ ಚಲ್ಲುತ್ತಾರೆ. ಮುಂದೆ ಇಪ್ಪತ್ತು-ಮೂವತ್ತು ದಿನಗಳಲ್ಲಿ ಮೂಕ ಕಣ್ಣುಗಳು ಉಬ್ಬಿದ್ದು ಕಂಡು ಬರುತ್ತದೆ. ಆಗ ಅವನ್ನು ಹಚ್ಚಲಿಕ್ಕೆ ಉಪಯೋಗಿಸಬಹುದು.

ಪುಣೆಯಲ್ಲಾದ ಪ್ರಯೋಗಗಳಿಂದ ಮಾವಿನ ಕಣ್ಣು ಹಚ್ಚಲಿಕ್ಕೆ ಆಗಸ್ಟ-ಸೆಪ್ಟೆಂಬರ ತಿಂಗಳುಗಳು ಇತರ ತಿಂಗಳುಗಳಿಗಿಂತ ಯೋಗ್ಯವೆಂದು ಕಂಡು ಬಂದಿರುತ್ತದೆ. ಆದರೆ ಈ ವಿಷಯುವನ್ನು ಇನ್ನೂ ನಿಶ್ಚಯವಾಗಿ ನಿರ್ಣಯಿಸಲು ಬರುವಂತಿಲ್ಲ.

ಇಜಿಪ್ತ ದೇಶದಲ್ಲಿ ಎಲ್‌ಝುಯಾದಿ ಎಂಬವರು ಮಾವಿನ ಕಣ್ಣುಗಳನ್ನು ಹಚ್ಚುವದರಲ್ಲಿ ಪ್ರಯತ್ನವನ್ನು ಕೆಲವು ವರ್ಷಗಳಿಂದ ನಡೆಸಿದ್ದು ಅವರಿಗೆ ಎಷ್ಟೋ ಯಶಸ್ಸು ದೊರೆತಿದೆಯೆಂದು ಇತ್ತೀಚೆಗೆ ಪ್ರಸಿದ್ಧವಾಗಿದೆ.

**ನೆಡುವದು :**—ಮಾವಿನ ಗಿಡಗಳನ್ನು ನೆಟ್ಟು ತೋಟವನ್ನು ತಯಾರಿಸಲಿಕ್ಕೆ, ಹೊಲವನ್ನು ವೊದಲಿನ ವರ್ಷದಲ್ಲಿ ಒಂದೆರಡು ಸಾರೆ ಹೂಡಿ ಹರಗಿ, ಸೆಣಿ

ಬಿನ ಗಿಡಗಳನ್ನು ಬಿತ್ತಿ ಅವು ಹೂವಿಗೆ ಬಂದ ಬಳಿಕ ಮಣ್ಣಿನಲ್ಲಿ ಹೂಳುವದು ಒಳ್ಳೇದು. ಬೈಲುಸೀಮೆಯ ಸಪಾಟಾದ ಹೊಲಗಳಲ್ಲಿ ಇದು ಸುಲಭ. ಮಲ್ನಾಡದಲ್ಲೂ ಉತ್ತರ ಕನ್ನಡ ಜಿಲ್ಲೆಯಂಥ ಗುಡ್ಡಗಾಡು ಪ್ರದೇಶದಲ್ಲೂ ಹೂಡುವದು ಸಾಧ್ಯವಲ್ಲ. ಆದರೆ ಅಲ್ಲಿಯ ಮಣ್ಣೂ ಅದರ ಕೆಳಗಿನ ಕಲ್ಲೂ ಮಿದು ವಿರುತ್ತವೆ. ಅವುಗಳಲ್ಲಿ ನೀರು ಹಿಡಿದು ನಿಂತಿರುವದಿಲ್ಲ. ಮಣ್ಣು ಒಣಗಿ ಬಿರಿಯುವದಿಲ್ಲ. ಆದ ಕಾರಣ ಅಲ್ಲಿ ಹೂಡದೆ ಇರುವದರಿಂದ ಹಾನಿಯಿಲ್ಲ.

ಬೇಸಿಗೆಯಲ್ಲಿ ಮೂರು ಫೂಟು ಅಗಲ, ಮೂರು ಫೂಟು ಉದ್ದ, ಮೂರು ಫೂಟು ಆಳವಾದ ಕುಣಿಗಳನ್ನು ತೆಗೆಯುತ್ತಾರೆ. ಮೇಲಿನ ೧॥ ಫೂಟು ಥರದ ಮಣ್ಣನ್ನು ಒಂದು ಮಗ್ಗಲಲ್ಲೂ, ಕೆಳಗಿನ ೧॥ ಫೂಟು ಥರದ ಮಣ್ಣನ್ನು ಇನ್ನೊಂದು ಮಗ್ಗಲಲ್ಲೂ ಬೇರೆ ಬೇರೆಯಾಗಿ ಒಟ್ಟುತ್ತಾರೆ. ಇದರ ಕಾರಣವೇನಂದರೆ, ಮೇಲಿನ ಮಣ್ಣು ಗಾಳಿ ಬಿಸಿಲು ಮುಂತಾದವುಗಳ ಹೊಡತದಿಂದ ಜೀರ್ಣವಾಗಿರುತ್ತದೆ. ಕೆಳಗಿನ ಮಣ್ಣು ಜೀರ್ಣವಾಗಿರುವದಿಲ್ಲ. ಗಿಡಗಳನ್ನು ನೆಡುವಾಗ ಕೆಳಗಿನ ಮಣ್ಣು ಮೇಲೂ ಮೇಲಿನ ಮಣ್ಣು ಕೆಳಗೂ ಆದರೆ ಹೊಸತಾಗಿ ನಟ್ಟ ಗಿಡಗಳ ಬೇರುಗಳಿಗೆ ಅವಶ್ಯವಿದ್ದ ಅನ್ನವು ಸುಲಭವಾಗಿ ದೊರೆತು ಅವು ತೀವ್ರ ಬೆಳೆಯಲಿಕ್ಕೆ ಅನುಕೂಲವಾಗುತ್ತದೆ. ಕುಣಿಗಳನ್ನು ತೆಗೆಸಿದ ಬಳಿಕ ಅವು ಮೂರು ನಾಲ್ಕು ತಿಂಗಳು ಬಿಸಿಲು ಗಾಳಿಗಳ ಹೊಡತಕ್ಕೆ ತೆರೆದಿರಬೇಕು ಇದರಿಂದ ಅವುಗಳ ಬುಡದ ಮಣ್ಣಿನ ಥರದಲ್ಲಿರುವ ಪೋಷಕ ದ್ರವ್ಯಗಳು ಗಿಡಗಳಿಗೆ ಸುಲಭವಾಗಿ ದೊರೆಯುವಂತಾಗುತ್ತವಲ್ಲದೆ, ಮಣ್ಣಿನ ಜಿಗಟು ಕಡಿಮೆಯಾಗುತ್ತದೆ. ಹೀಗೆ ತೆರೆದಿಡುವದು ಶಕ್ಯವಿಲ್ಲದಿದ್ದರೆ, ಪ್ರತಿಯೊಂದು ಕುಣಿಯಲ್ಲೂ ಒಣಗಿದ ಹುಲ್ಲು ಕಸಗಳನ್ನಾಗಲಿ, ಗಿಡಗಂಟಿಗಳ ಟೊಂಗೆಗಳನ್ನಾಗಲಿ ತುಂಬಿ ಸುಡಬಹುದು. ಸುಟ್ಟ ಬಳಿಕ ಬೂದಿಯನ್ನು ಕುಣಿಯಲ್ಲೇ ಇಡಬೇಕು

ಮುಂದೆ ಮಳೆಗಾಲದ ಆರಂಭದಲ್ಲಿ ಒಂದು ಕುಣಿಗೆ ನಾಲ್ಕು ಬುಟ್ಟಿ ಸಗಣಿ ಗೊಬ್ಬರ, ಐದು ರತ್ತಲು ಎಲುಬಿನ ಹುಡಿ ಇವುಗಳನ್ನು ಮೇಲೆ ಒಟ್ಟಿದ ಮಣ್ಣಿನಲ್ಲಿ ಚನ್ನಾಗಿ ಕಲೆಸಿ ಹಾಕಬೇಕು. ಎಲುಬಿನ ಹುಡಿಯು ಸಿಗದಿದ್ದರೆ ಹತ್ತು ರತ್ತಲು ಇಡೀ ಎಲುಬುಗಳನ್ನು ಕಟಕರಿಂದ ದೊರಕಿಸಿ ಕುಣಿಯ ಬುಡದಲ್ಲಿ ಹಾಕಬಹುದು. ಅದರ ಮೇಲೆ ಸಗಣೀ ಗೊಬ್ಬರ ಮಣ್ಣು ಇವುಗಳ ಮಿಶ್ರಣವನ್ನು ತುಂಬಬೇಕು. ಮತ್ತು ಕೊಡಿಕಟ್ಟಿ ತಯಾರಾದ ಗಿಡಗಳನ್ನು ಅದರಲ್ಲಿ ನೆಡಬೇಕು. ನೆಡುವಾಗ ಗಿಡವು ಇದ್ದ ಚೋರೆಯನ್ನು ಒಡೆಯಬೇಕು. ಒಳಗಿನ ಮಣ್ಣಿನ ಉಂಡೆಯನ್ನು ಒಡೆಯಬಾರದು. ಬೇರುಗಳು ಹರಿಯದಂತೆ ಆದಷ್ಟು ಪ್ರಯತ್ನಮಾಡಬೇಕು. ಉಂಡೆಯು ಹೊರಬದಿಗೂ ಬುಡಕ್ಕೂ ಬೇರುಗಳು

ಮುದುಡಿಕೊಂಡಿದ್ದರೆ ಅವನ್ನು ನೋವಾಗದಂತೆ ಬಿಡಿಸಿ ಪಸರಿಸಬೇಕು. ಗಿಡವು ಚೋರಿಯಲ್ಲಿದ್ದಾಗ ಅದರ ಬೇರು ಮಣ್ಣಿನಲ್ಲಿ ಎಷ್ಟು ಮುಚ್ಚಲ್ಪಟ್ಟಿದ್ದಿತೋ ಅಷ್ಟೇ ಕುಣಿಯಲ್ಲಿ ನೆಡುವಾಗಲೂ ಮುಚ್ಚಲ್ಪಡಬೇಕು. **ಕೊಡಿ ಕಟ್ಟಿದ ಸಂದಿನ ಭಾಗವನ್ನು ಮಣ್ಣಿನಲ್ಲಿ ಎಂದೂ ಹುಗಿಯ ಬಾರದು.** ಯಾಕಂದರೆ ಈ ಭಾಗವು ಸುಖಿಯಾಗಿರುವದರಿಂದ ಹಸಿಯಾದ ಮಣ್ಣಿನಲ್ಲಿ ಅದು ಕೊಳೆಯ ಬಹುದು. ಮಣ್ಣಿನೊಳಗಿನ ಜೀವ ಜಂತುಗಳು ಅದನ್ನು ತಿನ್ನಬಹುದು. ಅದರಿಂದ ಗಿಡವು ಸಾಯಬಹುದು.

ಮುಂಗಾರೀ ಮಳೆಯು ಭರದಿಂದ ಬೀಳುವ ಉತ್ತರ ಕನ್ನಡದಂಥ ಪ್ರದೇಶಗಳಲ್ಲಿ, ಮಳೆಯ ಜೋರು ಕಡಿಮೆಯಾದ ಬಳಿಕ ಅಂದರೆ ಶ್ರಾವಣ ಮಾಸದ ತುದಿಯಲ್ಲಿ ಗಿಡಗಳನ್ನು ನೆಡುವದು ಹಿತಕರವಾಗ ಬಹುದು.

**ನೀರು ಹಾಯಿಸುವದು :—**ನೆಟ್ಟ ಕೂಡಲೆ ಕುಣಿಯೊಳಗಿನ ಮಣ್ಣನ್ನು ಒತ್ತಿ ತುಳಿಯಬೇಕು. ಮತ್ತು ಕುಣಿಯು ಬುಡದ ವರೆಗೆ ತೊಯ್ಯುವಷ್ಟು ನೀರು ಹಾಯಿಸಬೇಕು. ಬಳಿಕ ನಾಲ್ಕನೇ ದಿನ ಎರಡನೇ ಸಾರೆ, ಹತ್ತನೇ ದಿನ ಮೂರನೇ ಸಾರೆ ನೀರು ಹಾಯಿಸಬೇಕು. ಮುಂದೆ ಮಳೆಯಾದರೆ ನೀರು ಹಾಯಿಸುವದು ಬೇಡ. ಆಗದಿದ್ದರೆ ಹತ್ತು ದಿನಗಳಿಗೊಮ್ಮೆ ನೀರು ಹಾಯಿಸ ಬೇಕು. ಚಳಿಗಾಲದಲ್ಲಿ ಎಂಟು ದಿನಗಳಿಗೊಮ್ಮೆ ಮತ್ತು ಬೇಸಿಗೆಯಲ್ಲಿ ಆರು ದಿನಗಳಿಗೊಮ್ಮೆ ಹೀಗೆ ಗಿಡಗಳಿಗೆ ಅವಶ್ಯವಿದ್ದಂತೆ ನೀರು ಹಾಯಿಸ ತಕ್ಕದ್ದು. ಮಾವಿನ ಗಿಡಗಳು ಫಲಕ್ಕೆ ಬಂದ ಬಳಿಕ ಅಂದರೆ ಸುಮಾರು ನಾಲ್ಕೈದು ವರ್ಷದವಾದ ಬಳಿಕ ಅವುಗಳಿಗೆ ಪ್ರತ್ಯೇಕವಾಗಿ ನೀರು ಹಾಯಿಸ ಬೇಕಾಗುವದಿಲ್ಲ. ಅವು ಇಡೀ ವರ್ಷ ಸ್ವಾಭಾವಿಕವಾಗಿ ಬೀಳುವ ಮಳೆಯ ನೀರನ್ನೇ ಅವಲಂಬಿಸುತ್ತವೆ. ಆದಾಗ್ಯೂ ಅವುಗಳಿಗೆ ಸರಿಯಾಗಿ ನೀರು ಹಾಯಿಸಿದರೆ ಅವುಗಳ ಉತ್ಪನ್ನವು ಹೆಚ್ಚಾಗುತ್ತದೆಂತಲೂ, ಅವು ಪ್ರತಿ ವರ್ಷ ಫಲ ಬಿಡುತ್ತವೆಂತಲೂ ಈಗಾದ ಪ್ರಯೋಗಗಳಿಂದ ಅನುಮಾನಿಸುತ್ತಾರೆ. ಈ ವಿಷಯದಲ್ಲಿ ಇನ್ನೂ ಪ್ರಯೋಗಗಳಾಗುವದು ಅವಶ್ಯವಿದೆ

**ಗಿಡಗಳನ್ನು ನೆಡುವ ಅಂತರ :—**ಹಣ್ಣಿನ ಗಿಡಗಳನ್ನು ಎಷ್ಟು ಅಂತರದ ಮೇಲೆ ನೆಡಬೇಕೆಂಬದು ಆಯಾ ಗಿಡಗಳ ಟೊಂಗೆಗಳು ಪಸರಿಸುವದನ್ನು ಅವಲಂಬಿಸಿರುತ್ತದೆ ಎಂಬ ವಿಷಯವನ್ನು ೧೬ನೇ ಪಾನಿನಲ್ಲಿ ಸವಿಸ್ತರವಾಗಿ ಹೇಳಿದ್ದೇವೆ. ಮಾವಿನ ಗಿಡಗಳನ್ನು ನೆಡುವಾಗಲೂ ಈ ತತ್ವವನ್ನೇ ಅನುಸರಿಸತಕ್ಕದ್ದು. ಈ ಗಿಡಗಳು ಚಿಕ್ಕವಿರುವಾಗ ದೂರ ದೂರ ನೆಟ್ಟರೆ ಇವುಗಳ ನಡುವಿನ ಅಂತರವು ವ್ಯರ್ಥ ಹಾಳಾಗುತ್ತದೆಂದು ಕಾಣಬಹುದು. ಆದರೆ ಮುಂಗೆ ಮರಗಳ ವಿಸ್ತಾ

ರವು ಬೆಳೆದು ಕೆಳಭಾಗದ ಟೊಂಗೆಗಳಿಗೆ ಸರಿಯಾದ ಪ್ರಮಾಣದಲ್ಲಿ ಬಿಸಿಲೂ ಹವೆಯೂ ದೊರೆಯು ಬೇಕಾದರೆ ಮೊದಲೇ ಸಾಕಷ್ಟು ಅಂತರವನ್ನು ಇಡತಕ್ಕದ್ದು. ಬಿಸಿಲು ಹವೆಗಳು ದೊರೆಯದೆ ಇದ್ದರೆ ಟೊಂಗೆಗಳು ಫಲ ಬಿಡುವದಿಲ್ಲ. ಅದರಿಂದ ಉತ್ಪನ್ನದಲ್ಲಿ ಹಾನಿಯಾಗುತ್ತದೆ ಹದಿನೈದು, ಇಪ್ಪತ್ತು ಫೂಟುಗಳ ಅಂತರದ ಮೇಲೆ ನೆಟ್ಟ ಮಾವಿನ ಮರಗಳು ಹತ್ತು ಹದಿನೈದು ವರ್ಷಗಳಲ್ಲಿ ಸೂರ್ಯನ ರಶ್ಮಿಗಳು ನೆಲವನ್ನು ಮುಟ್ಟಲಾಗದಷ್ಟು ದಟ್ಟವಾಗಿ ತೋಟವನ್ನೆಲ್ಲ ಮುಚ್ಚುವದನ್ನು ನೋಡಬಹುದು. ಮಾವಿನ ಮರಗಳ ವಿಸ್ತಾರವು ಬಹಳ ಆಗುವದರಿಂದ ಅವುಗಳ ನಡುವೆ ಮೂವತ್ತು ಫೂಟು ಅಂತರವನ್ನಾದರೂ ಇಡಲೇ ಬೇಕೆಂದು ಅನುಭವದಿಂದ ಸಿದ್ಧವಾಗಿದೆ. ದಾರವಾಡದ ರಾವಬಹದ್ದೂರ ಬಿ. ಎಲ್. ಪಾಟೀಲ, ಎಮ್. ಎಲ್. ಎ. ಇವರು ತಮ್ಮ ಹೊಸ ತೋಟದಲ್ಲಿ ಆಫೂಸ ಗಿಡಗಳನ್ನು ನಾಲ್ವತ್ತೈದು ಫೂಟುಗಳಿಗೊಂದರಂತೆ ನೆಡುವ ವ್ಯವಸ್ಥೆ ಮಾಡಿದ್ದಾರೆ.

**ಉಪ ಬೆಳೆಗಳು :—** ಗಿಡಗಳನ್ನು ನೆಟ್ಟ ಬಳಿಕ ಯಾವದಾದರೊಂದು ಉಪ ಬೆಳೆಯನ್ನು ಮೊದಲಿನ ನಾಲ್ಕಾರು ವರ್ಷಗಳಲ್ಲಿ ಬೆಳೆಸ ಬಹುದು. ಇದರಿಂದ ಗಿಡಗಳ ನಡುವಿನ ಅಂತರವು ವ್ಯರ್ಥವಾಗಿ ಹೋಗುವದಿಲ್ಲ. ಸ್ವಲ್ಪವೇ ಆದರೂ ಉತ್ಪನ್ನವು ಬರುತ್ತದೆ. ಬೆಂಡೆ, ಚಾಳಿ, ಬದನೆ, ಮೆಣಸು, ನೆಲಗಡ್ಲೆ ಮುಂತಾದವುಗಳನ್ನು ಸಾಮಾನ್ಯವಾಗಿ ಬೆಳೆಸ ಬಹುದೆಂದು ೧೯ ನೇ ಪಾನಿನಲ್ಲಿ ಹೇಳಿರುತ್ತೇವೆ. ಇವುಗಳ ಹೊರ್ತಾಗಿ ಪಪ್ಪಾಯಿ, ಬಾಳೆ ಮುಂತಾದವುಗಳನ್ನು ಮಾವಿನ ಗಿಡಗಳ ನಡುವೆ ಮೊದಲಿನ ಒಂದೆರಡು ವರ್ಷಗಳಲ್ಲಿ ಕೆಲವು ಪ್ರದೇಶಗಳಲ್ಲಿ ಬೆಳೆಸ ಬಹುದೆಂದು ಅನುಭವದಿಂದ ತಿಳಿದು ಬಂದಿದೆ. ಕರ್ನಾಟಕದಲ್ಲಿ ವಿಜಾಪೂರ ಜಿಲ್ಹೆಯಲ್ಲಿ ಬೇಸಿಗೆಯಲ್ಲಿ ಬಿಸಿಲಿನ ತಾಪವು ಬಹಳ. ಜ್ಯೇಷ್ಠ ಆಷಾಢ ಮಾಸಗಳಲ್ಲಿ ಬಿರು ಗಾಳಿಯೂ ಬಹಳ ಜೋರಿನಿಂದ ಬೀಸುತ್ತದೆ. ಅಲ್ಲಿ ಪಪ್ಪಾಯಿ ಗಿಡಗಳನ್ನು ಎಂಟು ಫೂಟಿಗೊಂದರಂತೆ ನೆಟ್ಟರೆ ಮಾವಿನ ಗಿಡಗಳ ನಡುವಿನ ಅಂತರವು ಉಪಯೋಗಿಸಲ್ಪಡುವದಲ್ಲದೆ, ಅವುಗಳಿಗೆ ಚಿಕ್ಕ ವಯಸ್ಸಿನಲ್ಲಿ ಅತ್ಯವಶ್ಯವಾದ ನೆರಳು ಸಿಗುತ್ತದೆ ಬಿರುಗಾಳಿಯಿಂದಲೂ ರಕ್ಷಿಸಲ್ಪಡುತ್ತವೆ. ಪಪ್ಪಾಯಿ ಗಿಡಗಳಿಂದ ಉತ್ಪನ್ನವೂ ಚನ್ನಾಗಿ ಬರುತ್ತದೆ. ಆದರೆ ಇವೆರಡನ್ನೂ ಬೆಳೆಸುವಲ್ಲಿ ಪ್ರಥಮದಲ್ಲೇ ಗಾಳಿಯ ದಿಕ್ಕಿಗೆ ಅಡ್ಡವಾಗಿ ಚೊಗಚೆ, ಶೇವರಿ, ಔಡಲ ಮುಂತಾದವುಗಳ ಬೇಲಿಯನ್ನು ಬೆಳೆಸಿಕೊಳ್ಳುವದು ಅತ್ಯವಶ್ಯವು. ಪಪ್ಪಾಯಿ ಗಿಡಗಳನ್ನು ಎರಡು ವರ್ಷಗಳಲ್ಲಿ ತೆಗೆದು ಹಾಕಬಹುದು.

ಅದರಂತೆ ತೋಟದಲ್ಲಿ ಮೊದಲು ಗುಜರಾಥ ಬಾಳೆಯನ್ನು ನೆಟ್ಟು, ಎರಡು ಮೂರು ವರ್ಷಗಳಾದ ಬಳಿಕ ಅದರ ನಡುವೆ ಅಲ್ಲಲ್ಲಿ ಕುಣಿಗಳನು. ತೆಗೆಸಿ ಮಾ

ವಿನ ಗಿಡಗಳನ್ನು ನೆಡ ಬಹುದು. ಬಾಳೆಯಿಂದ ಮಾವಿನ ಗಿಡಗಳಿಗೆ ನೆರಳೂ ಮರೆಯೂ ದೊರೆತು ಬಿಸಿಲು ಗಾಳಿಗಳಿಂದ ಸಂರಕ್ಷಣೆಯಾಗುತ್ತದೆ. ಮುಂದೆ ಮಾವಿನ ಗಿಡಗಳು ಎರಡು ಮೂರು ವರ್ಷದವಾಗುವಷ್ಟರಲ್ಲಿ ಗುಜರಾಥ ಬಾಳೆಯ ತೋಟವು ಹಳೆತಾದ ಬಳಿಕ ಅವನ್ನು ಪೂರಾ ತೆಗೆದು ಮಾವಿನ ಗಿಡಗಳಿಗೆ ತೋಟ ವನ್ನು ತೆರವು ಮಾಡಿ ಕೊಡತಕ್ಕದ್ದು. ಶ್ರೀ ವೆಂಕಟೇಶ ಶ್ರೀನಿವಾಸರಾವ ಕಾಜ ಲಗಿಯವರು ವಿಜಾಪೂರದಲ್ಲಿರುವ ತಮ್ಮ ತೋಟದಲ್ಲಿ ಗುಜರಾಥ ಬಾಳೆಗಳ ನಡುವೆ ಮಾವಿನ ಗಿಡಗಳನ್ನು ನೆಟ್ಟಿದ್ದಾರೆ.

ಬಸರಾಯೀ ಅಥವಾ ಬಂಗಾಲೀ ಎಂಬ ಜಾತಿಯ ಬಾಳೆಯು ಬಹು ಗಿಡ್ಡ ವಾದದ್ದು. ಒಂದೂವರೆ ವರ್ಷಗಳಲ್ಲಿ ಅದರ ತೋಟವನ್ನೆಲ್ಲ ಕಿತ್ತು ತೆಗೆದು ತಿರುಗಿ ನೆಡುತ್ತಾರೆ. ಈ ಬಾಳೆಯ ಜಾತಿಯ ಪ್ರಸಾರವು ಇನ್ನೂ ಕರ್ಣಾಟಕ ದಲ್ಲಿ ಆಗಿರುವದಿಲ್ಲ. ಇದು ವಿಜಾಪೂರ ಜಿಲ್ಹೆಯ ಪರಿಸ್ಥಿತಿಗಳಿಗೆ ಬಹು ಯೋಗ್ಯ ವಾದದ್ದು ಅನ್ನಬಹುದು. ಖಾನದೇಶದಲ್ಲಿ ಮಾವಿನ ಗಿಡಗಳನ್ನು ನೆಟ್ಟ ಕೂಡಲೆ ನಡುವಿನ ಅಂತರದಲ್ಲಿ ಬಸರಾಯಿ ಬಾಳೆಯನ್ನು ಐದೈದು ಪೂಟುಗಳಿಗೊಂದರಂತೆ ನೆಟ್ಟು ಮುಂದೆ ಒಂದೂವರೆ ವರ್ಷಗಳಲ್ಲಿ ತೆಗೆದು ಹಾಕುತ್ತಾರೆ. ಈ ಬಾಳೆ ಯಿಂದ ನೆರಳೂ ಮರೆಯೂ ದೊರೆತು ಚಿಕ್ಕ ಮಾವಿನ ಗಿಡಗಳು ಆ ದೇಶದ ಪ್ರಖ ರವಾದ ಬಿಸಿಲಿನಿಂದಲೂ, ಬಿಸಿ ಬಿಸಿ ಗಾಳಿಯಿಂದಲೂ ರಕ್ಷಿಸಲ್ಪಡುತ್ತವೆ. ಈ ಪದ್ಧತಿಯನ್ನು ವಿಜಾಪೂರ ಜಿಲ್ಹೆಯಲ್ಲೂ ಅನುಸರಿಸಿ ನೋಡಬಹುದು.

ಬಾಳೆಯನ್ನು ಮಾವಿನ ಗಿಡಗಳ ನಡುವೆ ನೆಡಬಹುದಾದರೂ, ನೆಲದ ಸ್ಥಿತಿ ಯನ್ನು ನೋಡಿ ನೆಡಬೇಕು. ಯಾಕಂದರೆ ಬಾಳೆಗೆ ನೀರು ಬಹಳ ಬೇಕಾಗುತ್ತದೆ. ಮಾವಿನ ಗಿಡಗಳಿಗೆ ಅಷ್ಟು ನೀರು ಬೇಡ. ಆದ್ದರಿಂದ ನೆಲದಲ್ಲಿ ನೀರು ನಿಲಿಸು ವಂತೆ ಇದ್ದರೆ ಬಾಳೆಯನ್ನು ನೆಡುವದು ತಪ್ಪಾಗುವದು. ಇದರಿಂದ ಮಾವಿನ ಗಿಡಗಳಿಗೆ ಹಾನಿಯಾಗುವದು. ನೀರು ಚನ್ನಾಗಿ ಬಸಿದು ಹೋಗುವಂಥ ಸೈಲಾದ ಮಸಾರಿ ಮಣ್ಣಿನಲ್ಲೂ, ಹರಿದು ಬಂದು ನಿಂತ ಮಣ್ಣಿನಲ್ಲೂ, ನದೀ ದಂಡೆಯ ಉಸುಕು ಮಣ್ಣಿನಲ್ಲೂ ಮಾವಿನ ಗಿಡಗಳ ನಡುವೆ ಬಾಳೆಯನ್ನು ನೆಡಬಹುದು. ಅದೂ ಮೊದಲಿನ ಎರಡು ವರ್ಷಗಳ ವರೆಗೆ. ಮುಂದೆ ಪ್ರತಿವರ್ಷ ಪಲ್ಲೇಕಾಯಿ ಮುಂತಾದವುಗಳನ್ನೇ ಬೆಳೆಸಬೇಕು.

ಕರ್ಣಾಟಕದ ಇತರ ಭಾಗದಲ್ಲಿ ಬಿಸಿಲೂ ಗಾಳಿಯೂ ವಿಜಾಪುರದಷ್ಟು ಪ್ರಖರವಾಗಿರುವದಿಲ್ಲವೆಂದು ಸಾಮಾನ್ಯವಾಗಿ ಹೇಳಬಹುದು. ಅಲ್ಲಿ ಮಾವಿನ ಗಿಡಗಳ ನಡುವೆ ಪಲ್ಲೇಕಾಯಿ ಮುಂತಾದವುಗಳನ್ನೇ ಬೆಳೆಸಿಕೊಳ್ಳುವದು ಹಿತ

ವಾಗುವದು. ಯಾವದನ್ನು ಬೆಳೆಸಿದರೂ, ಬಹಳ ಆದರೆ ಆರು ವರ್ಷಗಳ ತರು ವಾಯ ಇಡೀ ತೋಟವು ಮಾವಿನ ಗಿಡಗಳಿಗೇ ತೆರೆದಿಡಲ್ಪಡಬೇಕು

**ಫಲಬಿಡುವ ವಯಸ್ಸು :**—ಗೊರಟೆಯಿಂದ ಸಸಿಗಳನ್ನು ಬೆಳೆಸಿದರೆ ಅವು ಫಲಕ್ಕೆ ಬರಲಿಕ್ಕೆ ಸುಮಾರು ಎಂಟು ವರ್ಷಗಳು ಬೇಕಾಗುತ್ತವೆ. ಪರಿಸ್ಥಿತಿ ಗಳಿಗನುಸರಿಸಿ ಇದರಲ್ಲಿ ತುಸು ವ್ಯತ್ಯಾಸವಾಗಬಹುದು. ಈ ಗಿಡಗಳು ಬುಡದಲ್ಲಿ ಪಸರಿಸುವದಿಲ್ಲ, ನೆಟ್ಟಗೆ ಎತ್ತರವಾಗಿ ಬೆಳೆಯುತ್ತವೆ. ಕೊಡಿ ಕಟ್ಟಿ ಇಲ್ಲವೆ ಕಣ್ಣು ಹಚ್ಚಿ ಬೆಳೆಸಿದ ಗಿಡಗಳು ಹಾಗಲ್ಲ. ಅವು ಬುಡದಲ್ಲೇ ಟಿಸಿಲು ಬಿಟ್ಟು ಪಸರಿಸುತ್ತವೆ ಮರಗಳೂ ಬಹಳ ಎತ್ತರವಾಗುವದಿಲ್ಲ. ಅವು ಸುಮಾರು ನಾ ಲ್ಕೈದು ವರ್ಷಗಳಲ್ಲಿ ಹೂಬಿಟ್ಟು ಫಲ ಹಿಡಿಯುತ್ತವೆ ಮೂರನೇ ವರ್ಷದೊ ಳಗೆ ಹೂಬಿಟ್ಟರೆ, ಎಲ್ಲ ಹೂವುಗಳನ್ನು ಚಿವುಟಿ ಹಾಕಬೇಕು. ಯಾಕಂದರೆ ಇಷ್ಟು ಚಿಕ್ಕ ವಯಸ್ಸಿನಲ್ಲಿ ಫಲಕ್ಕೆ ಬಂದ ಗಿಡಗಳು ಮುಂದೆ ಅಶಕ್ತವಾಗುತ್ತವೆ. ಬಹು ದಿನ ಬಾಳುವದಿಲ್ಲ ಕೊಡಿ ಕಟ್ಟುವದರಿಂದ ಮಾವಿನ ಗಿಡಗಳು ಬೇಗನೆ ಫಲಕ್ಕೆ ಬರುತ್ತವಾದರೂ, ಅವು ಸಸಿಗಳಿಂದಾದ ಮರಗಳಷ್ಟು ವರ್ಷ ಬಾಳುವ ದಿಲ್ಲವೆಂದು ಹೇಳಲು ಅಭ್ಯಂತರವಿರಲಾರದು.

**ಗೊಬ್ಬರ :**—ಮಾವಿನ ಗಿಡಗಳಿಗೆ ಯಾವ ಯಾವ ಗೊಬ್ಬರಗಳನ್ನು ಎಷ್ಟೆಷ್ಟು ಹಾಕಬೇಕೆಂಬ ವಿಷಯದಲ್ಲಿ ಇನ್ನೂ ಸಾಕಷ್ಟು ಪ್ರಯೋಗಗಳು ನಡೆ ದಿರುವದಿಲ್ಲ. ಆದ್ದರಿಂದ ಈ ಗಿಡಗಳಿಗೆ ಇಂತಿಷ್ಟೇ ಗೊಬ್ಬರವನ್ನು ಹಾಕು ವದು ಉತ್ತಮ ಎಂಬ ವಿಷಯವನ್ನು ಇನ್ನೂ ನಿಶ್ಚಿತವಾಗಿ ಹೇಳಲು ಬರುವಂ ತಿಲ್ಲ. ಆದಾಗ್ಯೂ ಈ ಕೆಳಗೆ ಬರೆದಂತೆ ಗೊಬ್ಬರವನ್ನು ಹಾಕ ಬಹುದೆಂದು ಸೂಚಿಸಿದರೆ ತಪ್ಪಾಗಲಾರದು.

ಕೊಡಿ ಹಚ್ಚಿದ ಮಾವಿನ ಗಿಡಗಳನ್ನು ನೆಡುವಾಗ ಕುಣಿಗಳಲ್ಲಿ ಎಷ್ಟು ಗೊಬ್ಬರ ಹಾಕಬೇಕೆಂಬದನ್ನು ಈ ಮೊದಲೇ ಹೇಳಿದ್ದೇವೆ. ಗಿಡಗಳನ್ನು ನೆಟ್ಟು ಒಂದು ವರ್ಷವಾದ ಬಳಿಕ ಪ್ರತಿಯೊಂದು ಗಿಡಕ್ಕೆ ಒಂದು ಬುಟ್ಟಿ(೨೦ ರತ್ತಲು) ಸಗಣೀ ಗೊಬ್ಬರವನ್ನೂ, ೧ ರತ್ತಲು ಎಲುಬಿನ ಹುಡಿಯನ್ನೂ, ೨ ರತ್ತಲು ಬೂ ದಿಯನ್ನೂ ಕೂಡಿಸಿ ಹಾಕ ಬಹುದು. ಈ ಮಿಶ್ರಣವನ್ನು ಮುಂದೆ ಪ್ರತಿ ವರ್ಷ ೧೦ ರತ್ತಲು ಸಗಣೀ ಗೊಬ್ಬರ, ೧ ರತ್ತಲು ಎಲುಬಿನ ಹುಡಿ, ೨ ರತ್ತಲು ಬೂದಿ ಈ ಪ್ರಮಾಣದಲ್ಲಿ ಹೆಚ್ಚು ಮಾಡುತ್ತ ಹೋಗಬೇಕು. ಅಂದರೆ ಎರಡನೇ ವರ್ಷ ದಲ್ಲಿ ಪ್ರತಿಯೊಂದು ಗಿಡಕ್ಕೆ ೩೦ ರತ್ತಲು ಸಗಣೀ ಗೊಬ್ಬರ, ೨ ರತ್ತಲು ಎಲು

ಬಿನ ಹುಡಿ, ೪ ರತ್ತಲು ಬೂದಿ ಇವುಗಳ ಮಿಶ್ರಣವನ್ನು ಹಾಕಬಹುದು. ಮತ್ತು ಮೂರನೇ ವರ್ಷದಲ್ಲಿ ೪೦ ರತ್ತಲು ಸೆಗಣೀ ಗೊಬ್ಬರ, ೩ ರತ್ತಲು ಎಲುಬಿನ ಹುಡಿ, ೬ ರತ್ತಲು ಬೂದಿ ಇವುಗಳ ಮಿಶ್ರಣವನ್ನು ಹಾಕ ಬಹುದು. ಇದೇ ಪ್ರಕಾರ ಏರಿಸುತ್ತ ಹೋಗಿ ಒಂಭತ್ತನೇ ವರ್ಷದಲ್ಲಿ ೧೦೦ ರತ್ತಲು ಸೆಗಣೀ ಗೊಬ್ಬರ, ೯ ರತ್ತಲು ಎಲುಬಿನ ಹುಡಿ, ೧೮ ರತ್ತಲು ಬೂದಿ ಇವುಗಳ ಮಿಶ್ರಣವನ್ನು ಹಾಕಿ, ಮುಂದೆ ಪ್ರತಿ ವರ್ಷ ಏರಿಸದೆ ಇಷ್ಟೇ ಮಿಶ್ರಣವನ್ನು ಹಾಕುತ್ತ ಹೋಗ ಬಹುದು.

ಸೆಗಣೀ ಗೊಬ್ಬರವು ಚನ್ನಾಗಿ ಕೊಳೆತ ಹಳೇ ಗೊಬ್ಬರ ವಾಗಿರಬೇಕು. ಎಲುಬಿನ ಹುಡಿಯನ್ನು ಕಟಿಕರಿಂದ ಇಡೀ ಎಲುಬುಗಳನ್ನು ತರಿಸಿ ಒಡೆದು ಮಾಡಿಸಿಕೊಳ್ಳಬಹುದು. ಸುಣ್ಣ ಮಣ್ಣುಗಳನ್ನು ಕಲೆಸಿ ಗಿಲಾಯವನ್ನು ತಯಾರಿಸುವ ಗಾಣದಲ್ಲಿ ಎಲುಬುಗಳನ್ನು ಹಾಕಿ ಸಣ್ಣ ಹುಡಿಯನ್ನು ಮಾಡಿಸಿಕೊಂಡರೆ ಸುಲಭವಾಗುವದು. ಬೂದಿಯಲ್ಲಿದ್ದ ಮುಖ್ಯ ಪೋಷಕ ದ್ರವ್ಯವಾದ ಪೊಟೇಶವು ನಮ್ಮ ದೇಶದ ಎಲ್ಲ ಮಣ್ಣಿನಲ್ಲೂ ಸಾಕಷ್ಟು ಪ್ರಮಾಣದಲ್ಲಿ ಇರುತ್ತದೆಂತಲೂ, ಈ ದ್ರವ್ಯವನ್ನು ಗೊಬ್ಬರಗಳ ಅಥವಾ ಬೂದಿಯ ರೂಪದಿಂದ ಗಿಡಗಳಿಗೆ ಪೂರೈಸುವದು ಅವಶ್ಯವಲ್ಲವೆಂದೂ ತಜ್ಞರು ಅಭಿಪ್ರಾಯಪಡುತ್ತಾರೆ. ಆದರೂ ಮನೆಯಲ್ಲಿ ಆಗುವ ಬೂದಿಯನ್ನೆಲ್ಲ ಒತ್ತಟ್ಟಿಗೆ ಕೂಡಿಸಿಟ್ಟು ಗಿಡಗಳಿಗೆ ಉಪಯೋಗಿಸಿದರೆ ಹಾನಿಯಾಗಲಾರದು. ಸಾಧ್ಯವಾದಲ್ಲಿ, ಪ್ರತಿಯೊಂದು ಗಿಡಕ್ಕೆ ಒಂದೆರಡು ರತ್ತಲು ಹಿಂಡಿ ಗೊಬ್ಬರವನ್ನು ನಾಲ್ಕೈದು ವರ್ಷಗಳ ವರೆಗೆ ಹಾಕಬಹುದು. ಕುಸುಬಿ ಹಿಂಡಿ, ಹೊನ್ನೆ ಹಿಂಡಿ, ಔಡಲ ಹಿಂಡಿ ಮುಂತಾದವುಗಳನ್ನು ಗಿಡಗಳಿಗೆ ಉಪಯೋಗಿಸಬಹುದು. ಗಿಡಗಳು ಫಲಕ್ಕೆ ಬಂದ ಬಳಿಕ ಹಿಂಡಿ ಗೊಬ್ಬರವನ್ನು ಎಚ್ಚರದಿಂದ ಹಾಕಬೇಕು. ಯಾಕಂದರೆ ಹಿಂಡಿ ಗೊಬ್ಬರದಿಂದ ಮಾವಿನ ಗಿಡಗಳ ಟೊಂಗೆ-ಎಲೆಗಳ ಬೆಳವಣಿಗೆಯು ಮಿತಿಮೀರಿ ಹೆಚ್ಚಾಗಿ ಅವು ಹೂಬಿಡುವದು ಕಡಿಮೆಯಾಗುವ ಸಂಭವವಿರುತ್ತದೆ.

ಮಾವಿನ ಗಿಡಗಳಿಗೆ ಮೇಲಿನ ಮಿಶ್ರಣವನ್ನು ಮಳೆಗಾಲದ ಆರಂಭಕ್ಕೆ ಹಾಕಿ ಗಿಡದ ಸುತ್ತಲೂ ಮಣ್ಣಿನಲ್ಲಿ ಚನ್ನಾಗಿ ಕೂಡಿಸಬೇಕು. ಗಿಡಗಳು ದೊಡ್ಡವಾದ ಹಾಗೆ ಗೊಬ್ಬರವನ್ನು ಅವುಗಳ ಬೊಡ್ಡೆಯಿಂದ ಹೆಚ್ಚೆಚ್ಚು ದೂರ ಹಾಕಬೇಕು. ಸಾಮಾನ್ಯವಾಗಿ ಗಿಡಗಳ ಟೊಂಗೆಗಳು ವ್ಯಾಪಿಸಿ ಮಧ್ಯಾಹ್ನದಲ್ಲಿ ನೆರಳು ಮಾಡುವಷ್ಟು ಸ್ಥಳದಲ್ಲಿ ಗೊಬ್ಬರಗಳ ಮಿಶ್ರಣವನ್ನು ಪಸರಿಸಿ ಹಾಕಬೇಕು. ಮತ್ತು ಅದನ್ನು ಸಲಿಕೆಯಿಂದಾಗಲಿ ಗುದ್ದಲಿಯಿಂದಾಗಲಿ ಮಣ್ಣಿನಲ್ಲಿ ಚನ್ನಾಗಿ ಕೂಡಿಸಬೇಕು. ಬೊಡ್ಡೆಯ ಬುಡಕ್ಕೆ ಗೊಬ್ಬರವನ್ನು ಎಂದೂ ಒಟ್ಟಬಾರದು.

ಮಾವಿನ ಗಿಡಗಳಿಗೆ ತಿನ್ನುವ ಉಪ್ಪನ್ನು ಹಾಕುವ ಪದ್ಧತಿಯು ಕೊಂಕಣ ಪಟ್ಟಿಯಲ್ಲಿ ಇರುತ್ತದೆ. ಒಂದೊಂದು ಗಿಡಕ್ಕೆ ಹತ್ತು ರತ್ತಲುಗಳ ವರೆಗೂ ಉಪ್ಪು ಹಾಕುತ್ತಾರೆ. ಉಪ್ಪು ಹಾಕಿದ ಗಿಡಗಳ ಟೊಂಗೆ ಎಲೆಗಳ ಬೆಳವಣಿಗೆಯು ಮಿತಿಮೀರಿ ಹೆಚ್ಚಾಗದೆ, ಹೂ ಬಿಡುವದು ಅಧಿಕವಾಗುತ್ತದೆ ಎಂದು ತಿಳಿಯುತ್ತಾರೆ. ಇದಲ್ಲದೆ ಉಪ್ಪಿನಲ್ಲಿ ನೀರು ಹಿಡಿದುಕೊಳ್ಳುವ ಶಕ್ತಿಯು ಇರುವದರಿಂದ ಮಳೆಗಾಲದ ಹಸಿಯು ಬಹಳ ದಿನಗಳವರೆಗೆ ಆರುವದಿಲ್ಲ. ಉಪ್ಪಿನಿಂದ ಹಣ್ಣುಗಳಿಗೂ ಒಂದು ತರದ ಹೆಚ್ಚಿನ ರುಚಿಯು ಬರುತ್ತದೆ ಅನ್ನುತ್ತಾರೆ. ಈ ವಿಷಯವಾಗಿ ಇನ್ನೂ ಆಗಬೇಕಾದಷ್ಟು ಪ್ರಯೋಗಗಳಾಗಲಿಲ್ಲ. ಬಹಳ ಮಳೆಯಾಗುವ ಕೊಂಕಣ ಪಟ್ಟಿಯಲ್ಲಿ ಉಪ್ಪು ಹಾಕುವದರಿಂದ ಗಿಡಗಳಿಗೆ ಹಾನಿಯೇನೂ ಆಗುವದಿಲ್ಲ. ಆದರೆ ಹೆಚ್ಚು ಮಳೆಯಾಗದೆ ಇದ್ದ ಬೈಲು ಸೀಮೆಯಲ್ಲಿ ಉಪ್ಪು ಹಾಕುವದರಿಂದ ಗಿಡಗಳಿಗೆ ಹಾನಿಯಾಗಬಹುದು. ಯಾಕಂದರೆ ಉಪ್ಪು ಹಾಕುವದರಿಂದ ನೆಲದೊಳಗಿನ ನೀರಿನಲ್ಲಿ ಕರಗಿದ ದ್ರವ್ಯಗಳ ಪ್ರಮಾಣವು ಹೆಚ್ಚಾಗಿ, ಬೇರುಗಳು ನೀರನ್ನು ಸೇದಿಕೊಳ್ಳುವದರ ಬದಲು, ಬೇರುಗಳೊಳಗಿನ ರಸವೇ ಹೊರಬೀಳಲಾರಂಭಿಸಬಹುದು. ಇದರಿಂದ ಗಿಡಗಳು ಸಾಯುವ ಸಂಭವವಿರುತ್ತದೆ. ಬಹಳ ಮಳೆಯಾಗುವ ಉತ್ತರ ಕನ್ನಡ ಜಿಲ್ಹೆಯಲ್ಲಿ ಹೆಚ್ಚಾದ ಉಪ್ಪಿನ ಅಂಶವೆಲ್ಲ ತೊಳೆದು ಹೋಗುವದರಿಂದ ಹೀಗಾಗಲಾರದು.

**ಮರಗಳ ಆಕಾರ :—** ಮಾವಿನ ಮರಗಳು ಒಂದೇ ಬೊಡ್ಡೆಯ ಮೇಲೆ ಸುಂದರವಾದ ಗೊಡ್ಡ ಚಂಡಿನ ಆಕಾರದಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತಿರುವದನ್ನು ಬೈಲು ಸೀಮೆಯಲ್ಲಿ ಎಷ್ಟೋ ಸ್ಥಳಗಳಲ್ಲಿ ನೋಡಬಹುದು. ಇಂಥ ಮರಗಳು ಸಾಮಾನ್ಯವಾಗಿ ಗೊರಟೆಯಿಂದಾದವು. ಕೊಡಿ ಕಟ್ಟಿದವುಗಳಲ್ಲ. ಕೊಡಿ ಕಟ್ಟಿ ಬೆಳೆಸಿದ (ಕಲಮಿ) ಮರಗಳು ನೆಲದ ಸಮೀಪದಲ್ಲೇ ಟೊಂಗೆಗಳೊಡೆದು ಪಸರಿಸಿ ಬೆಳೆಯುತ್ತವೆ. ಅವು ಬಹಳ ಎತ್ತರವಾಗುವದಿಲ್ಲ. ಆದರಿಂದ ಅವುಗಳ ಆರೈಕೆಯನ್ನು ಮಾಡುವದು, ಹಣ್ಣುಗಳನ್ನು ಹರಿಯುವದು ಮುಂತಾದ ಕೆಲಸಗಳು ಸುಲಭವಾಗುತ್ತವೆ. ಆದರೆ ತೋಟದಲ್ಲಿ ಮರದ ಟೊಂಗೆಗಳೆಲ್ಲ ಪಸರಿಸುವದರಿಂದ ಎತ್ತುಗಳನ್ನು ಹೂಡಿ ಹೂಡುವದು ಮುಂತಾದ ಕೆಲಸಗಳನ್ನು ಮಾಡುವದು ಸಾಧ್ಯವಾಗುವದಿಲ್ಲ. ಆಳುಗಳಿಂದಲೇ ಇವೆಲ್ಲ ನಡೆಯಬೇಕಾಗುತ್ತವೆ. ಅದರಿಂದ ಶ್ರಮವೂ ವೆಚ್ಚವೂ ಬೆಳೆಯುತ್ತವೆ. ಆದದರಿಂದ ಕೊಡಿಕಟ್ಟಿದ ಗಿಡಗಳು ಸಣ್ಣವಿರುವಾಗಲೇ ನೆಲದಿಂದ ನಾಲ್ಕೈದು ಪೂಟುಗಳ ವರೆಗಾದರೂ ಅಡ್ಡ ಟೊಂಗೆಗಳು ಒಡೆಯಗೊಡದೆ ನೆಟ್ಟಗೆ ಬೆಳೆಯುವಂತೆ ನೋಡಿಕೊಳ್ಳಬೇಕು.

ಅಡ್ಡ ಚಿಗುರುಗಳು ಒಡೆದರೆ ಅವನ್ನು ಚಿವುಟಿ ಹಾಕಬೇಕು. ನಡುವಿನ ಬೊಡ್ಡೆಯು ನಾಲ್ಕೈದು ಫೂಟುಗಳಷ್ಟು ಎತ್ತರವಾದ ಬಳಿಕ ಅಡ್ಡ ಟೊಂಗೆಗಳು ಒಡೆದರೆ ಅಡ್ಡಿಯಿಲ್ಲ.

ಎಲ್ಲ ಪ್ರದೇಶಗಳಲ್ಲೂ ಗಿಡಗಳನ್ನು ಹೀಗೆ ಬೆಳೆಸಿಕೊಳ್ಳುವದು ಉತ್ತಮವು. ಆದರೆ ಉತ್ತರ ಕನ್ನಡದ ಗುಡ್ಡಗಾಡು ಪ್ರದೇಶಗಳಲ್ಲಿ ಎತ್ತುಗಳಿಂದ ಕೆಲಸವೂಡಿಸಿಕೊಳ್ಳುವದು ಎಂದಿಗೂ ಸಾಧ್ಯವಿರುವದಿಲ್ಲ. ಅಲ್ಲಿ ಮರಗಳ ಟೊಂಗೆಗಳು ನೆಲದ ಸಮೀಪದಲ್ಲಿ ಇದ್ದರೂ ಹೆಚ್ಚಿನ ಹಾನಿಯಾಗಲಾರದು.

**ಮಾವಿನ ಜಾತಿಗಳು :—**ಮಾವಿನ ಜಾತಿಗಳು ೫೦೦ಕ್ಕೆ ಮಿಕ್ಕಿರುತ್ತವೆ. ಅವುಗಳನ್ನು ವರ್ಗೀಕರಿಸಲು ಯಾರೂ ಹೆಚ್ಚಿನ ಪ್ರಯತ್ನವನ್ನು ಮಾಡಿರುವದಿಲ್ಲ. ಅಲ್ಲಲ್ಲಿ ಮಾಡಿದ ಅಲ್ಪ ಪ್ರಯತ್ನಗಳಿಗೆ ಹೆಚ್ಚಿನ ಯಶಸ್ಸು ದೊರೆಯಲಿಲ್ಲ. ಇದಕ್ಕೆ ಕಾರಣವೇನಂದರೆ· ಮಾವಿನಲ್ಲಿ ಸ್ವಾಭಾವಿಕವಾಗಿ ಕೇಶರಗಳ ಸಂಕ್ರಮಣವು ಯಥೇಚ್ಛವಾಗಿ ಆಗುತ್ತದೆ. ಅದರಿಂದ ಪ್ರತಿವರ್ಷ ಹೊಸ ಜಾತಿಗಳು ಉಂಟಾಗುತ್ತವೆ. ಮತ್ತು ಗೊರಟೆಯಿಂದಾದ ಗಿಡಗಳು ಫಲಕ್ಕೆ ಬರಲಿಕ್ಕೆ ಆರೆಂಟು ವರ್ಷಗಳು ಹತ್ತುತ್ತವೆ. ಯಾವದೊಂದು ಗಿಡವು ಇಂಥದೇ ಜಾತಿಯದೆಂದು ನಿರ್ಣಯಿಸಲಿಕ್ಕೆ ಅಷ್ಟು ವರ್ಷಗಳು ಬೇಕು. ಇದಲ್ಲದೆ ಒಂದೇ ಜಾತಿಯ ಮಾವಿಗೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿರುತ್ತವೆ ಮುಂಬಯಿಯ ಪಾಯರಿ ಮಾವಿಗೆ ಬೆಂಗಳೂರಲ್ಲಿ 'ರಸಪುರೀ' ಅನ್ನುತ್ತಾರೆ. ಮತ್ತು ಆಫೂಸಿಗೆ 'ಬಾದಾಮಿ' ಅನ್ನುತ್ತಾರೆ. ಆದದರಿಂದ ಎಲ್ಲ ಮಾವಿನ ಜಾತಿಗಳನ್ನು ಕಲೆ ಹಾಕಿ, ವರ್ಣಿಸಿ ವರ್ಗೀಕರಿಸುವದು ಅಶಕ್ಯವೇ ಆಗಿದೆ ಅನ್ನಬಹುದು.

ಆದಗ್ಯೂ ಕೆಲವೊಂದು ಬಗೆಯಿಂದ ತಾತ್ಕಾಲಿಕವೇ ಆದ ವರ್ಗಗಳನ್ನು ಕೆಲವು ತಜ್ಞರು ಸೂಚಿಸಿರುತ್ತಾರೆ. ಈ ಕಾರ್ಯದಲ್ಲಿ ಅವರು ಮಾವಿನ ಹಣ್ಣುಗಳನ್ನೇ ಮುಖ್ಯವಾಗಿ ಇಟ್ಟುಕೊಂಡು, ಅವುಗಳ ಆಕಾರ, ಭುಜ, ಚುಂಚು, ತೊಗಟೆ, ಬಣ್ಣ, ರಸ, ಕತ್ತ, ರುಚಿ, ಗೊರಟೆ, ತಡೆಯುವಿಕೆ ಮುಂತಾದ ಗುಣಗಳನ್ನು ಅವಲಂಬಿಸಿ ಮಾವಿನ ಜಾತಿಗಳನ್ನು ಬೇರೆ ಬೇರೆ ವರ್ಗಗಳಲ್ಲಿ ಸೇರಿಸಿರುತ್ತಾರೆ. ಆದರೆ ಈ ಗುಣಗಳಲ್ಲೂ ವರ್ಗಗಳಲ್ಲೂ ಆಗಾಗ್ಗೆ ವ್ಯತ್ಯಾಸವಾಗುವದರಿಂದ, ಇವುಗಳನ್ನು ಎಷ್ಟರ ಮಟ್ಟಿಗೆ ಅನುಸರಿಸಬೇಕೆಂಬದು ಸಂಶಯಾಸ್ಪದವಾಗಿದೆ. ಇರಲಿ.

ತೋಟಿಗನ ಪೂರ್ತೆಗೆ, ಮಾವಿನಲ್ಲಿ ಏಕಾಂಕುರೀ, ಅನೇಕಾಂಕುರೀ ಎಂಬ ಎರಡು ದೊಡ್ಡ ವಿಭಾಗಗಳಿರುತ್ತವೆಂದು ತಿಳಿದುಕೊಂಡು, ನಮ್ಮ ದೇಶದಲ್ಲಿ

ಪೀಕಾಂಕುರೀ ಜಾತಿಗಳೇ ಮುಖ್ಯವೆಂದು ತಿಳಿಯುವ. ಈ ಜಾತಿಗಳನ್ನು ಸಾಗು ಮಾಡುವ ರೀತಿಯನ್ನು ನೋಡಿ, ಅವುಗಳಲ್ಲಿ ಮೂರು ವಿಭಾಗಗಳನ್ನು ಸೂಚಿಸಬಹುದು. ಅವು ಯಾವವೆಂದರೆ: (೧) ಕೊಡಿಕಟ್ಟಿದ ಜಾತಿಗಳು (ಕಲಮಿ); (೨) ಇರಸಾಲ; ಮತ್ತು (೩) ಊರ ಮಾವು.

(೧) ಯಾವದೊಂದು ಮಾವಿನ ಮರದ ಹಣ್ಣು ಉತ್ತಮವಾಗಿದೆಯೆಂದು ತಿಳಿದು ಬಂದೊಡನೆ, ಅದರ ಗುಣಗಳನ್ನು ಶಾಶ್ವತವಾಗಿ ಇಡಲಿಕ್ಕೆ ಅದರ ಗಿಡಗಳನ್ನು ಕೊಡಿ ಕಟ್ಟಿ ತಯಾರಿಸುವದೇ ಸುಲಭ ಉಪಾಯವು. ಇದರ ಪರಂಪರೆಯು ಮುಂದೆ ಕೊಡಿ ಕಟ್ಟಿಯೇ ನಡೆಯುವದು. ಇಂಥ ಜಾತಿಗಳನ್ನು ಕೊಡಿ ಕಟ್ಟಿದ ಜಾತಿಗಳು ಎಂದು ಕರೆಯಬಹುದು

(೨) ಉತ್ತಮ ಹಣ್ಣಿನ ಮರದಿಂದ ಸಸಿಗಳನ್ನು, ಗೊರಟೆಗಳಿಂದಲೂ ಮಾಡಬಹುದು. ಆದರೆ ಈ ಸಸಿಗಳು ತಾಯಿ ಮರದ ಹಣ್ಣಿನಂಥದೇ ಹಣ್ಣುಗಳನ್ನು ಕೊಡುವವು ಎಂಬ ನೇಮವಿಲ್ಲ. ಆದರೂ ಈ ಹಣ್ಣುಗಳು ಸಾಮಾನ್ಯವಾಗಿ ಮೇಲಿನ ತರಗತಿಯವೇ ಇರುತ್ತವೆನ್ನಬಹುದು. ಇಂಥ ಮರಗಳಿಗೆ ಇರಸಾಲ ಅನ್ನಬಹುದು.

(೩) ಮೇಲಿನ ಎರಡು ವರ್ಗಗಳನ್ನು ಬಿಟ್ಟು ಉಳಿದ ಎಲ್ಲ ಜಾತಿಗಳು ಈ ವರ್ಗದಲ್ಲಿ ಸೇರುತ್ತವೆ

ಇದಾದರೂ ಸ್ವಾಭಾವಿಕವೂ ಸಕಾರಣವೂ ಆದ ವರ್ಗೀಕರಣವಲ್ಲವೆಂಬದು ಹೌದು. ಯಾಕಂದರೆ, ಊರ ಮಾವಿನ ಜಾತಿಗಳಲ್ಲಿ ಬಾಳೆ ಮಾವಿನಂಥ ಯಾವದೊಂದು ಉತ್ತಮ ಜಾತಿಯು ದೊರೆತರೆ, ಅದನ್ನು ಮುಂದೆ ಕೊಡಿ ಕಟ್ಟಿ ಅಭಿವೃದ್ಧಿ ಮಾಡಲಾರಂಭಿಸಿದರೆ ಅದನ್ನು ಮೊದಲಿನ ವರ್ಗದಲ್ಲಿ ಸೇರಿಸಲೇ ಬೇಕಾಗುತ್ತದೆ. ಅಂದ ಬಳಿಕ ಈ ವರ್ಗೀಕರಣದ ಉಪಯೋಗವಿಲ್ಲದಂತಾಯಿತು. ಆದಾಗ್ಯೂ ಈಗಿದ್ದ ಜಾತಿಗಳನ್ನು ಅನುಕೂಲವಾಗಿ ತಿಳಿದು ಕೊಳ್ಳುವದಕ್ಕಾಗಿ ಹೀಗೆ ವರ್ಗೀಕರಿಸಿರುತ್ತೇವೆ.

ಹಿಂದುಸ್ಥಾನದೊಳಗಿನ ಕೆಲವು ಮುಖ್ಯ ಜಾತಿಗಳ ಹೆಸರುಗಳನ್ನು ಇಲ್ಲಿ ಕೊಡಬಹುದು:—

ಫಜಲೀ, ಗೋಪಾಳ ಭೋಗ, ಕೃಷ್ಣಾವರ್ತೀ, ಲಂಗಡಾ, ಮಹಾಜನ ಪಸಂತ ಮುಂತಾದವು ಬಂಗಾಲದ ಕಡೆಯ ಜಾತಿಗಳು.

ಪಿಟರ, ಗೋವಾ, ದಿಲ್ ಪಸಂತ, ನೀಲಮ್, ತೋತಾಪುರೀ, ನಾಜೂಕ ಪಸಂತ, ಸುಂದರಶಾ, ರಸಪುರೀ ಮುಂತಾದವು ದಕ್ಷಿಣ ಹಿಂದುಸ್ಥಾನದೊಳಗಿನ ಜಾತಿಗಳು.

ಆಫೂಸ, ಮಾಂಕುರಾದ, ಪರ್ನಾಂಡಿನ, ಮುಶರಾದ, ಮಲಗೋವಾ ಮುಂತಾದವು ಗೋವೆಯ ಜಾತಿಗಳು.

ಗೋಪ್ಪೋ, ಕಲಕತ್ತಿಯೋ, ಬನೇಶೋಡ, ಬಾಟ್ಲಿ, ರುಸ, ಕಾಪಸಜೀ ಪಟೇಲ, ಪಾಯರಿ, ಆಫೂಸ, ಖುಂಟ ಮುಂತಾದವು ಮುಂಬಯಿ ಇಲಾಖೆಯೊಳಗಿನ ಜಾತಿಗಳು.

ಬಾಳೆ ಮಾವು, ಕರೇ ಮಾವು, ಕರೇ ಇಷಾಡು, ಬಿಳೇ ಇಷಾಡು ಮುಂತಾದವು ಕರ್ಣಾಟಕದೊಳಗಿನ ಜಾತಿಗಳು.

ಇವೆಲ್ಲವು ಸಾಧಾರಣವಾಗಿ ಕೊಡಿಕಟ್ಟಿ ಬೆಳೆಸುವ ಜಾತಿಗಳು. ಇವುಗಳಲ್ಲಿ ಆಫೂಸ, ಫರ್ನಾಂಡಿನ, ಬಾಟ್ಲಿ, ಖುಂಟ ಮುಂತಾದ ಜಾತಿಗಳು ಉತ್ತಮವೂ, ಬಹುದಿನ ತಡೆಯುವಂಥವೂ ಆಗಿರುವದರಿಂದ ದೂರದ ಬಾಜಾರಗಳಿಗೆ ಕಳಿಸಲಿಕ್ಕೆ ಅನುಕೂಲವಾಗಿರುತ್ತವೆ. ವಿಜಾಪೂರದ ಶ್ರೀ ಕಾಜಲಗಿಯವರ ತೋಟದಲ್ಲಿದ್ದ ಬೇದಾಣಾ, ಅಥವಾ ಖಜೂರಿಯಾ ಎಂಬ ಜಾತಿಯ ಹಣ್ಣು ತಿಂಗಳಗಟ್ಲೆ ಹಾಳಾಗದೆ ಇರುತ್ತದೆಂದು ತಿಳಿದು ಬಂದಿದೆ. ಇಂಥ ಜಾತಿಗಳನ್ನೇ ಕರ್ಣಾಟಕದಲ್ಲಿ ಬೆಳೆಸಿದರೆ ಮುಂಬಯಿಯಂಥ ದೂರದ ಬಾಜಾರಗಳಿಗೆ ಕಳಿಸುವದು ಸುಲಭವಾಗುವದು.

**ಮಾವಿನ ಗಿಡಗಳನ್ನು ಪರಸ್ಥಳಕ್ಕೆ ಕಳಿಸುವದು :—** ಕೊಡಿಕಟ್ಟಿ ತಯಾರಿಸಿದ ಮಾವಿನ ಗಿಡಗಳನ್ನು ನೆಡುವದಕ್ಕಾಗಿ ದೂರ ದೂರದ ಊರುಗಳಿಗೆ ಕಳಿಸುವದು ಕಷ್ಟಸಾಧ್ಯವಾಗಿತ್ತು. ಈ ಮೊದಲು ಗಿಡಗಳ ಚೋರೆಗಳನ್ನೇ ದೇವದಾರಿ ಪೆಟ್ಟಿಗೆಗಳಲ್ಲಿ ಇಟ್ಟು, ನೀರು ಹಾಕುವ ವ್ಯವಸ್ಥೆಯನ್ನು ಮಾಡಿ ಕಳಿಸುತ್ತಿದ್ದರು ಇದರಿಂದ ಪಾರ್ಸಲಿನ ಭಾರವು ಬೆಳೆದು ಉಗೆ ಬಂಡಿ, ಉಗೆ ಹಡಗಗಳ ವೆಚ್ಚವು ಹೆಚ್ಚು ತಗಲುತ್ತಿದ್ದಿತು. ಪೆಟ್ಟಿಗೆಗಳಲ್ಲಿ ಪಾರ್ಸಲು ಮಾಡುವ ವೆಚ್ಚವೂ ಬಹಳ ಆಗುತ್ತಿತ್ತು. ಆದರೆ ಇತ್ತಲಾಗಿನ ಶೋಧಗಳಿಂದ ಮಾವಿನ ಗಿಡಗಳನ್ನು ಪೋಸ್ಟಿನಿಂದ ಕಳಿಸೆ ಬಹುದೆಂದು ತಿಳಿದು ಬಂದಿದೆ. ಇದರಿಂದ ಗಿಡಗಳನ್ನು ಕಳಿಸುವ ವೆಚ್ಚವು ಬಹಳ ಕಡಿಮೆ ಆಗುತ್ತದೆ. ಪೋಸ್ಟಿನ ಪಾರ್ಸಲು ಮನೆಯ ಬಾಗಿಲಿಗೆ ತಂದು ಕೊಡಲ್ಪಡುವದರಿಂದ, ಉಗೆ ಬಂಡಿಯ ಸ್ಟೇಶನ್ನಿಗೆ ಹೋಗಿ ಪಾರ್ಸಲು ಬಂದಿದೆಯೋ ಇಲ್ಲವೋ ಎಂಬದನ್ನು ಕೇಳಿ, ದಾರಿ ನೋಡಿ, ಪಾರ್ಸಲು ಬಂದ ಬಳಿಕ ಮನೆಗೆ ತರಿಸಿಕೊಳ್ಳುವ ಹೆಚ್ಚಿನ ವೆಚ್ಚವೂ ಶ್ರಮವೂ ಉಳಿಯುತ್ತವೆ. ಇದಲ್ಲದೆ ಉಗೆ ಬಂಡಿಯಿಂದ ಗಿಡಗಳನ್ನು ದೂರ ದೂರದ ಊರುಗಳಿಗೆ ಕಳಿಸಲಿಕ್ಕೆ ಹೆಚ್ಚುಚ್ಚು ವೆಚ್ಚವು ಬರುತ್ತದೆ. ಪೋಸ್ಟಿ

ನಿಂದ ಇಡೀ ಹಿಂದುಸ್ಥಾನದ ಯಾವ ಭಾಗಕ್ಕೆ ಕಳಿಸುವದಾದರೂ ಅಷ್ಟೇ ಹಾಸಲು ಬೀಳುತ್ತದೆ.

ಪೋಸ್ಟಿನಿಂದ ಕೊಡಿಕಟ್ಟಿದ ಗಿಡಗಳನ್ನು ಕಳಿಸುವದಾದರೆ, ಟೊಂಗೆಗಳಿಲ್ಲದ ಸಶಕ್ತವಾದ ಸಣ್ಣ ಗಿಡಗಳನ್ನು ಆರಿಸಬೇಕು. ಅವುಗಳನ್ನು ದಿನಾಲು ಒಂದೆರಡು ತಾಸು ಎಳೆ ಬಿಸಿಲಿನಲ್ಲಿ ಇಡುತ್ತ, ನಾಲ್ಕೈದು ದಿನಗಳ ತರುವಾಯ ನೀರು ಕೊಡುವದನ್ನು ಸಾವಕಾಶ ಕಡಿಮೆ ಮಾಡಬೇಕು. ಸುಮಾರು ಹದಿನೈದು ದಿನಗಳಲ್ಲಿ ಬಿಸಿಲು ಬರೆಗಳನ್ನು ತಡೆಯುವಂತೆ ಆದ ಬಳಿಕ, ಅವುಗಳನ್ನು ಚೋರೆಗಳ ಹೊರಗೆ ತೆಗೆದು, ಮಣ್ಣಿನ ಉಂಡೆಯನ್ನು ನೀರಿನಲ್ಲಿ ಮುಣುಗಿಸಿ, ನೋವಾಗದಂತೆ ಎಲ್ಲ ಬೇರುಗಳನ್ನು ಸ್ವಚ್ಛವಾಗಿ ತೊಳೆದು ಬಿಡಬೇಕು. ಎಲೆಗಳನ್ನು ಅರ್ಧ ಇಂಚಿನಷ್ಟು ತೊಟ್ಟು ಬಿಟ್ಟು ಕತ್ತರಿಸಿ ಚಲ್ಲಬೇಕು. ಹೀಗೆ ತಯಾರಾದ ಕೋಲಿನಂತೆ ಕಾಣುವ ಗಿಡಗಳನ್ನು ಮೇಲಿನ ಜೊಡ್ಡೆಯೂ ಬೇರೂ ಕೂಡುವ ಭಾಗದಲ್ಲಿ ಸಣ್ಣ ನೂಲಿನಿಂದ ಕಟ್ಟಿ ಗುರುತು ಮಾಡಿಡಬೇಕು. ಮತ್ತು ಒಡ್ಡೆಯಾದ ಅರಿವೆಯ ಚೂರಿನಿಂದ ಇಡೀ ಗಿಡವನ್ನು ಸುತ್ತಬೇಕು ಇದರ ಮೇಲಿಂದ ಹಸಿಯಾದ ಹಾಂಸವನ್ನು ಸುಮಾರು ಒಂದು ಇಂಚು ದಪ್ಪವಾಗಿ ಸುತ್ತಬೇಕು. ಇದು ಸರಿಯಾಗಿ ಕೂಡ್ರುವಂತೆ ನೂಲಿನಿಂದ ಕಟ್ಟಬೇಕು. ಇದೇ ರೀತಿಯಲ್ಲಿ ಎಷ್ಟು ಗಿಡಗಳನ್ನು ಕಳಿಸುವದಿದೆಯೋ ಅವೆಲ್ಲವುಗಳನ್ನು ತಯಾರಿಸಿಕೊಳ್ಳಬೇಕು.

ಪಾರ್ಸೆಲು ಮಾಡಲಿಕ್ಕಿರುವ ಸಣ್ಣ ಪೆಟ್ಟಿಗೆಯಲ್ಲಿ ಈ ಗಿಡಗಳನ್ನು ಸರಿಯಾಗಿ ಮಲಗಿಸಿ ಇಡಬೇಕು. ಅವುಗಳ ಕೆಳಗೂ ಮೇಲೂ ಎಣ್ಣೆ ಕಾಗದವನ್ನು ಹಾಕಿ ಗಿಡಗಳು ಅಲ್ಲಾಡದಂತೆ ಪೆಟ್ಟಿಗೆಯನ್ನು ಕಾಗದದ ಚೂರುಗಳಿಂದಾಗಲಿ ಇನ್ನ್ಯಾತರಿಂದಾದರೂ ಆಗಲಿ ತುಂಬಿ ಬಂದು ಮಾಡಬೇಕು. ಮೇಲೆ ಪತ್ತೆಯನ್ನು ಬರೆದು ಟಿಕೀಟುಗಳನ್ನು ಹಚ್ಚಿ, ಪೋಸ್ಟಿನಿಂದ ಕಳಿಸಬೇಕು.

ಗಿಡಗಳ ಪಾರ್ಸೆಲು ಮುಟ್ಟಿದ ಬಳಿಕ, ಅದನ್ನು ಒಡೆದು ಗಿಡಗಳನ್ನು ಬಿಚ್ಚಿ, ಕೂಡಲೆ ಒಂದು ಬಾಲದಿಯಲ್ಲಿ ಅರ್ಧ ತಾಸಿನವರೆಗೆ ನೀರಿನಲ್ಲಿ ಮುಣುಗಿಸಿ ಇಡಬೇಕು. ಬಳಿಕ ತೆಗೆದು ೩೨ ನೇ ಪಾನಿನಲ್ಲಿ ಹೇಳಿದಂತೆ ಸಿದ್ಧಪಡಿಸಿಕೊಂಡ ಚೋರೆಯಲ್ಲಿ ಬೇರಿನ ಭಾಗವನ್ನು ಮಾತ್ರ ಹುಗಿದು ನೆಡಬೇಕು. ಚೋರೆಯಲ್ಲಿ ತುಂಬಾ ನೀರು ಹನಿಸಬೇಕು. ಬಳಿಕ ಗಿಡಗಳ ಚೋರೆಗಳನ್ನೆಲ್ಲ ಒತ್ತಟ್ಟಿಗೆ ನೆರಳಿನಲ್ಲಿ ಇಟ್ಟು, ಅವುಗಳ ನಾಲ್ಕೂ ದಿಕ್ಕಿನಲ್ಲೂ ಮೇಲ್ಗಡೆಗೂ ದಟ್ಟವಾದ ತಟ್ಟಿಯಿಂದ ಮರೆ ಮಾಡಿ, ಬೆಳಕೂ ಗಾಳಿಯೂ ಅವುಗಳಿಗೆ ಹತ್ತದಂತೆ ಮಾಡಬೇಕು. ತಟ್ಟಿಯ ಒಳಗಿನ ಹವೆಯನ್ನು ದಿನಕ್ಕೆ ಒಂದಾವರ್ತಿ ಬೆಳಿಗ್ಗೆ, ಒಂದಾವರ್ತಿ

ಸಂಚಿಗೆ ತಟ್ಟಿಯನ್ನು ತುಸು ತೆರೆದು ಬದಲಿಸಬೇಕು. ಚೋರಿಗೆಳಿಗೆ ತುಂಬಾ ನೀರು ಹಾಕುತ್ತಿರಬೇಕು. ತಟ್ಟಿಯ ಬದಲು, ನೆಲದಲ್ಲಿ ಸುಮಾರು ಎರಡು ಫೂಟು ಆಳವಾದ ಕುಣಿಯನ್ನು ಅಗೆದು, ಅದರ ಬುಡಕ್ಕೂ ಬದಿಗಳಿಗೂ ತುಂಬಾ ನೀರು ಸಿಂಪಡಿಸಿ ತೊಯ್ಸಿ, ಅದರಲ್ಲಿ ಗಿಡಗಳನ್ನು ನೆಟ್ಟ ಚೋರಿಗಳನ್ನು ಇಡ ಬಹುದು. ಕುಣಿಯ ಮೇಲೆ ಅಡ್ಡ ಕೋಲುಗಳನ್ನು ಹಾಕಿ ಅವುಗಳ ಮೇಲೆ ಗೋಣಿ ಚೀಲವನ್ನು ತೊಯ್ಸಿ ಮುಚ್ಚಿ ನೆರಳು ಮಾಡಬಹುದು. ಕುಣಿಯ ಲ್ಲೂ, ಚೋರಿಗಳಲ್ಲೂ ತುಂಬಾ ತೇವು ಇರುವಂತೆ ತಪ್ಪದೆ ನೋಡಿಕೊಳ್ಳಬೇಕು.

ಹೀಗೆ ವ್ಯವಸ್ಥೆ ಇಟ್ಟರೆ, ೧೫-೨೦ ದಿನಗಳಲ್ಲಿ ಗಿಡಗಳ ಮೇಲಿನ ಕಣ್ಣು ಗಳು (ಮೊಗ್ಗೆಗಳು) ಉಬ್ಬಿ ಚಿಗಿಯಲಾರಂಭಿಸುತ್ತವೆ. ಬಳಿಕ ಅವುಗಳಿಗೆ ಬಿಸಿ ಲು ಗಾಳಿಗಳು ತುಸು ತುಸು ದೊರೆಯುವಂತೆ ತಟ್ಟಿಯನ್ನು ಅಥವಾ ಕುಣಿಯಲ್ಲಿ ದ್ದರೆ ಗೋಣಿ ಚೀಲವನ್ನು ತೆರೆದಿಡಬೇಕು. ಕೆಲವು ದಿನಗಳಲ್ಲಿ ಅವುಗಳನ್ನು ಮರದ ನೆರಳಿನಲ್ಲಿ ತಂದು ಇಡಬಹುದು. ಹೀಗೆ ಕ್ರಮೇಣ ಗಿಡಗಳು ಬಲಿತು ಬೆಳೆಯುವಂತೆ ಮಾಡಿಕೊಳ್ಳಬೇಕು. ಗಿಡಗಳು ಚಿಗಿತು ಬೆಳೆಯಾರಂಭಿಸಿದ ಬಳಿಕ, ಅವುಗಳನ್ನು ಬೇಕಾದಲ್ಲಿ ನೆಡಬಹುದು.

ಇದರಿಂದ ಗಿಡಗಳನ್ನು ಪೋಸ್ಟಿನಿಂದ ಕಳಿಸುವದಕ್ಕೆ ತುಸು ಶ್ರಮವೂ, ತಿಳುವಳಿಕೆಯೂ ಬೇಕಾಗುತ್ತದೆಂಬದು ವ್ಯಕ್ತವಾಗುತ್ತದೆ. ಆದರೆ ಉಗೆಬಂಡಿ ಯಿಂದ ಗಿಡಗಳನ್ನು ಕಳಿಸುವದಕ್ಕೂ ಪೋಸ್ಟಿನಿಂದ ಕಳಿಸಲಿಕ್ಕೂ ಬೇಕಾಗುವ ವೆಚ್ಚದಲ್ಲಿ ಬಹಳ ಅಂತರವಾಗುತ್ತದೆ. ಪುಣೆಯಿಂದ ಪಂಜಾಬಕ್ಕೆ ಗಿಡಗಳನ್ನು ಕಳಿಸುವದಾದರೆ ಉಗೆಬಂಡಿಯ ವೆಚ್ಚವು ಪ್ರತಿಯೊಂದು ಗಿಡಕ್ಕೆ ಎರಡು ರೂಪಾ ಯಿ ನಾಲ್ಕಾಣೆ ಬರುತ್ತದೆಂತಲೂ, ಪೋಸ್ಟಿನ ವೆಚ್ಚವು ಒರೇ ಎರಡೂವರೆ ಆಣೆ ಬಗುತ್ತದೆಂತಲೂ ಪ್ರತ್ಯಕ್ಷ ಪ್ರಯೋಗಗಳಿಂದ ತಿಳಿದು ಬಂದಿರುತ್ತದೆ. ಮತ್ತು ಪೋಸ್ಟಿನಿಂದ ಐವತ್ತು ಗಿಡಗಳನ್ನು ಸಹ ಒಂದೇ ಸಾರೆ ಕಳಿಸಬಹುದು.

ಈ ವಿಷಯದಲ್ಲಿ ಇನ್ನೊಂದು ಸುಧಾರಣೆಯೇನಂದರೆ: ಕೊಡಿಕಟ್ಟಿದ ಮಾವಿನ ಗಿಡಗಳನ್ನು ಸಣ್ಣ ಸಣ್ಣ (ಅಂದರೆ ೬ ಇಂಚು ಉದ್ದ, ೩ ಇಂಚು ಅಗಲ ಇರುವ) ಚೋರಿಗಳಲ್ಲಿ ಬೆಳೆಸಿ ತಯಾರಿಸಿಕೊಂಡು, ಚೋರಿಗಳ ಸಹಿತ ಇಡೀ ಗಿಡ ಗಳನ್ನೇ ಪೋಸ್ಟಿನಿಂದ ಪಾರ್ಸಲಮಾಡಿ ಕಳಿಸುವದು. ಈ ಪದ್ಧತಿಯಲ್ಲಿ ಹೆಚ್ಚಿನ ಶ್ರಮವೂ ತಿಳುವಳಿಕೆಯೂ ಗಿಡಗಳನ್ನು ಕೊಳ್ಳುವವರಿಗೆ ಬೇಕಾಗುವದಿಲ್ಲ. ಯಾ ಕೆಂದರೆ ಎಲ್ಲ ಗಿಡಗಳೂ ಬೇರೆ ಬೇರೆ ಚೋರಿಗಳಲ್ಲಿ ಎರೆಗುದು ಸಹಿತ ಪೋಸ್ಟಿ ನಿಂದ ಬಂದು ಮುಟ್ಟುತ್ತವೆ. ಹೀಗೆ ಪಾರ್ಸಲಿನಿಂದ ಕಳಿಸಿದ ಗಿಡಗಳು

ನಾಲ್ಕು ದಿನಗಳ ಪ್ರವಾಸವನ್ನು ಸಹ ಸಹನಮಾಡುತ್ತವೆ. ಮತ್ತು ಪ್ರತಿಯೊಂದು ಗಿಡಕ್ಕೆ ಹದಿಮೂರು ಆಣೆ ವೆಚ್ಚವು ಬರುತ್ತದೆ.

ಈ ಪದ್ಧತಿಯಲ್ಲಿ ತುಸು ಹೆಚ್ಚು ಕಡಿಮೆ ಮಾಡಿ ವಿಲಾಯತಿ, ಅಮೇರಿಕೆ ಮುಂತಾದ ತಿಂಗಳಗಟ್ಲೆ ಪ್ರವಾಸದ ದೇಶಗಳಿಗೂ ಮಾವಿನ ಗಿಡಗಳನ್ನು ಕಳಿಸುವದು ಸಾಧ್ಯವಾಗಿದೆ.

**ಊರ ಮಾವಿನ ಜಾತಿಯ ಹಳೇ ಮರಗಳನ್ನು ಬದಲಿಸುವದು :—**ಎಷ್ಟೋ ಸ್ಥಳಗಳಲ್ಲಿ ದೊಡ್ಡ ದೊಡ್ಡ ಹಳೇ ಮಾವಿನ ಮರಗಳನ್ನು ಕಾಣಬಹುದು. ಇವುಗಳ ಹಣ್ಣು ಸಾಮಾನ್ಯವಾಗಿ ಹುಳಿಯಾಗಿರುತ್ತದೆ. ಇಂಥ ಮರಗಳನ್ನು ಕಡಿದು, ಅವುಗಳ ಸ್ಥಳದಲ್ಲಿ ಕೊಡಿಕಟ್ಟಿದ ಉತ್ತಮ ಜಾತಿಯ ಸಣ್ಣ ಗಿಡಗಳನ್ನು ಬೆಳೆಸುವದು ಸುಲಭವಾದರೂ ಎಷ್ಟೋ ಸಾರೆ ಇಷ್ಟವಾಗಿರುವದಿಲ್ಲ. ಆದದರಿಂದ ಚೋರಿಯಲ್ಲಿ ಕೊಡಿ ಕಟ್ಟಿ ಸಿದ್ಧವಾದ ಗಿಡಗಳನ್ನು ಕೊಂಡು ತಂದು, ಈ ಮರಗಳ ತುದಿಯ ಟೊಂಗೆಗಳಿಗೆ ತೂಗ ಹಾಕಿ, ಕೊಡಿಯ ಭಾಗವನ್ನು ಮರದ ಅಷ್ಟೇ ದೊಡ್ಡ ಟೊಂಗೆಗೆ ಭೆಟ್ಟಿ ಕೊಡಿಯ ಪದ್ಧತಿಯಿಂದ ಕಟ್ಟಿ ಬೆಳೆಸುತ್ತಾರೆ. ಕೊಡಿಯು ಮರದ ಟೊಂಗೆಯೊಡನೆ ಕೂಡಿ ಬೆಳೆಯುವ ತನಕ ಅಂದರೆ ಸುಮಾರು ಎರಡು ಮೂರು ತಿಂಗಳು ಮರದ ತುದಿಗೆ ತೂಗ ಹಾಕಿದ ಚೋರಿಗಳಿಗೆ ದಿನಾಲು ನೀರು ಹಾಕುವ ವ್ಯವಸ್ಥೆಯಾಗಬೇಕು. ಹೀಗೆ ಕೊಡಿ ಕಟ್ಟುವದಕ್ಕೆ "ತಲೆಕೊಡಿ" ಎನ್ನುತ್ತಾರೆ. ಈ ಪದ್ಧತಿಯ ಗುಣಾವಗುಣಗಳನ್ನು ೪೪-೪೫ ಪಾನುಗಳಲ್ಲಿ ನೋಡಬಹುದು. ಮಾವಿನ ಮರಗಳನ್ನು ಈ ರೀತಿಯಿಂದ ಎಷ್ಟೋ ಸ್ಥಳಗಳಲ್ಲಿ ಬದಲಿಸಿಕೊಂಡಿರುತ್ತಾರೆ. ಒಂದೇ ಮರದ ಟೊಂಗೆಗಳ ಮೇಲೆ ಬೇರೆ ಬೇರೆ ನಾಲ್ಕೆಂಟು ಜಾತಿಯ ಮಾವಿನ ಹಣ್ಣುಗಳು ಆಗುವದನ್ನು ಇದೇ ರೀತಿಯಿಂದ ಸಾಧಿಸಿಕೊಳ್ಳಬಹುದು.

**ಮಾವಿನ ಮರಗಳನ್ನು ಕಿತ್ತು ನೆಡುವದು :—** ಮಾವಿನ ಸಸಿಗಳ ತಾಯಿ ಬೇರು ಬಹಳ ಆಳವಾಗಿ ಹೋಗುತ್ತದೆಂದು ಈ ಮೊದಲೇ ಹೇಳಿದ್ದೇವೆ. ಅವುಗಳನ್ನು ಕಿತ್ತು ನೆಡುವಾಗ ತಾಯಿ ಬೇರು ಹರಿದು ಅಪಾಯವಾಗುತ್ತದೆ. ಬೇರು ಹರಿಯದಂತೆ ಆದಷ್ಟು ಯತ್ನವನ್ನು ಮಾಡಬೇಕು. ಕೆಲವು ಪ್ರಸಂಗಗಳಲ್ಲಿ ದೊಡ್ಡ ಗಿಡಗಳನ್ನೂ, ಸಣ್ಣ ಸಣ್ಣ ಮರಗಳನ್ನೂ ಕಿತ್ತು ನೆಡಬೇಕಾಗುತ್ತದೆ. ಎಲ್ಲಾದರೊಂದು ಕಡೆ ಅಲ್ಪಕಾಲದಲ್ಲಿ ದೊಡ್ಡ ಗಿಡವನ್ನು ಬೆಳೆಸಬೇಕಾದರೆ, ಇನ್ನೊಂದು ಸ್ಥಳದಿಂದ ದೊಡ್ಡ ಗಿಡವನ್ನು ತಂದು ನೆಡಬೇಕಾಗುತ್ತದೆ. ಅಥವಾ ಒಳ್ಳೇ ಜಾತಿಯದೊಂದು ಗಿಡವು ಇಮಾರತಿನ ಸಮೀಪ ಇದ್ದರೆ ಅದನ್ನು ಕಡಿಯುವದು ಇಷ್ಟವಾಗಿರುವದಿಲ್ಲ. ಇದ್ದಲ್ಲೇ ಇರಗೊಟ್ಟರೆ ಗಿಡವು ದೊಡ್ಡ

ದಾಗಿ ಇವೂರತಿಗೆ ಅಪಾಯುವನ್ನು ಉಂಟು ಮಾಡಬಹುದು. ಇಂಥ ಪ್ರಸಂಗ ಗಳಲ್ಲಿ ದೊಡ್ಡ ಮಾವಿನ ಗಿಡಗಳನ್ನೂ, ಸಣ್ಣ ಮರಗಳನ್ನೂ ಕಿತ್ತು ಇನ್ನೊಂದು ಸ್ಥಳದಲ್ಲಿ ನೆಡಬೇಕಾಗುತ್ತದೆ. ತಾಯಿ ಬೇರುಗಳಿಗೆ ಪೆಟ್ಟಾಗದಂತೆ ಇದನ್ನು ಮಾಡುವದು ಶಕ್ಯವೇ ಅಲ್ಲ. ಇಷ್ಟೇ ಅಲ್ಲ. ಉಳಿದ ದೊಡ್ಡ ದೊಡ್ಡ ಬೇರು ಗಳನ್ನು ಕತ್ತರಿಸಬೇಕಾಗುತ್ತದೆ.

ಮಾವಿನ ಗಿಡಗಳನ್ನು ಕೀಳುವಾಗ ಎರಡು ಇಂಚುಗಳಿಗಿಂತ ಕಡಿಮೆ ವ್ಯಾ ಸದ ಎಲ್ಲ ಟೊಂಗೆಗಳನ್ನು ಎಲೆಗಳ ಸಹಿತ ಕತ್ತರಿಸಿ ಹಾಕಬೇಕು. ಯಾಕೆಂದರೆ ಎಲೆಗಳಿಂದಲೂ ಎಳೆ ಟೊಂಗೆಗಳಿಂದಲೂ ಗಿಡಗಳೊಳಗಿನ ನೀರು ಉಗಿಯಾಗಿ ಹಾರಿ ಹೋಗುತ್ತಿರುತ್ತಗೆ. ಹೀಗೆ ಹೋಗುವ ನೀರನ್ನು ಬೇರುಗಳು ನೆಲದೊಳ ಗಿಂದ ನೀದಿಕೊಂಡು ತುಂಬಿಕೊಡದಿದ್ದರೆ, ಗಿಡಗಳ ನೀರಿನ ಆದಾಯಕ್ಕಿಂತ ವೆಚ್ಚವು ಹೆಚ್ಚಾಗಿ, ಅವು ಒಣಗುತ್ತವೆ. ಕೀಳುವಾಗ ಬೇರುಗಳು ಹರಿಯುತ್ತವೆ. ಕಡಿಯಲ್ಪಡುತ್ತವೆ. ಇದರಿಂದ ಗಿಡಗಳ ನೀರು ನೀದಿಕೊಳ್ಳುವ ಶಕ್ತಿಯು ಕಡಿ ಮೆಯಾಗುತ್ತದೆ. ಅದೇ ಪ್ರಮಾಣದಲ್ಲಿ ಅವುಗಳಿಂದ ನೀರು ಹೊರಗೆ ಹೋಗು ವದನ್ನು ನಿಲ್ಲಿಸಬೇಕು ಎಲೆಗಳನ್ನು ಸಣ್ಣ ನಣ್ಣ ಟೊಂಗೆಗಳನ್ನು ಕತ್ತರಿಸಿ ಚಲ್ಲಿದ ಬಳಿಕ ಉಳಿದ ಮೋಟವನ್ನು ಬುಡದಿಂದ ತುದಿಯ ವರೆಗೆ ಒಣ ಹುಲ್ಲಿ ನಿಂದ ಸುತ್ತಿ ಆದರ ಮೇಲೆ ನೀರು ಹನಿಸುತ್ತಿರಬೇಕು ಹೀಗೆ ಮಾಡುವದರಿಂದ ಮೋಟವು ಒಣಗುವದಿಲ್ಲ. ಆದರೆ ಹುಲ್ಲು ಸುತ್ತಿ ನೀರು ಸಿಂಪಡಿಸ ಹತ್ತಿದ ಬಳಿಕ ಮರದ ತೊಗಟೆಯ ಹೊರಗಿನ ಭಾಗವು ಕೊಳೆಯ ಬಹುದು. ಅದರಲ್ಲಿ ಹುಳ ಹುಪ್ಪಡಿಗಳಾಗಬಹುದು. ಆದ್ದರಿಂದ ಬಹಳ ನೀರು ಸಿಂಪಡಿಸಬಾರದು. ಗಿಡವು ಚಿಗಿಯಲಾರಂಭಿಸಿದ ಬಳಿಕ ಆದಷ್ಟು ಬೇಗನೆ ಹುಲ್ಲು ಸುತ್ತಿದ್ದನ್ನು ಬಿಚ್ಚಿ ಹಾಕಬೇಕು.

ನಣ್ಣ ಟೊಂಗೆಗಳನ್ನು ಇಟ್ಟರೂ ಗಿಡಗಳು ಬದುಕುತ್ತವೆಂದು ಕೆಲವರ ಅಭಿಪ್ರಾಯ ವದೆ. ಆದಾಗ್ಯೂ ಮೇಲೆ ಹೇಳಿದಂತೆ ವ್ಯವಸ್ಥೆ ಮಾಡಿಕೊಳ್ಳುವದ ರಿಂದ ಗಿಡಗಳು ಸಾಯುವದು ಕಡಿಮೆಯಾಗುವದು.

ಮಾವಿನ ಗಿಡಗಳನ್ನು ಕಿತ್ತು ನೆಡುವದಕ್ಕೆ ಮಳೆಗಾಲವು ಉತ್ತಮ ಕಾಲವು. ಅದರಲ್ಲೂ ಬಿಸಿಲು ಇಲ್ಲದೆ ಮೋಡಗಳು ಕವಿದ ದಿನಗಳಲ್ಲಿ ಗಿಡಗಳನ್ನು ಕಿತ್ತು ನೆಡು ವದು ಉತ್ತಮ.

ಮಾವಿನ ಗಿಡವನ್ನು ಕೀಳುವಾಗ, ಬೊಡ್ಡೆಯ ಸುತ್ತಲೂ ಎರಡು ಮೂರು ಫೂಟುಗಳ ಅಂತರದ ಮೇಲೆ ವರ್ತುಳಾಕಾರದಲ್ಲಿ ಮಣ್ಣು ಅಗೆಯಬೇಕು. ಅಂದರೆ ಬೊಡ್ಡೆಯ ಸುತ್ತಲು ೪ ಫೂಟು ವ್ಯಾಸದ ಮಣ್ಣಿನ ಉಂಡೆಯು ಉಳಿ

ಯುವದು. ಇದು ಒಡೆಯದಂತೆ ಉಂಡೆಯ ಬುಡವನ್ನು ಕಡಿಮೆ ಮಾಡ ಬೇಕು ಮತ್ತು ಉಂಡೆಯು ಒಡೆಯಬಾರದೆಂದು ಅದರ ಮೇಲೆ ಗೋಣಿಯ ನ್ನು ಕತ್ತದಿಂದ ಬಿಗಿದು ಕಟ್ಟಿಕೊಳ್ಳಬೇಕು. ಅಗೆಯುವಾಗ ಹತ್ತಿದ ಅಡ್ಡ ಬೇರುಗಳನ್ನೆಲ್ಲ ನೆಟ್ಟಗೆ ಕಡಿದುಕೊಳ್ಳಬೇಕು. ಸುಮಾರು ನಾಲ್ಕು ಫೂಟು ಆಳ ವಾಗಿ ಅಗೆದ ಬಳಿಕ ಗಿಡದ ಬುಡಕ್ಕಿರುವ ತಾಯಿ ಬೇರನ್ನು ಕಡಿದು, ಉಂಡೆಯ ನ್ನು ಗೋಣಿಯಿಂದ ಚನ್ನಾಗಿ ಕಟ್ಟಿಕೊಂಡು, ಹಾರೆಯಿಂದಾಗಲಿ ಬಲವಾದ ಕಟ್ಟಿ ಗೆಯಿಂದಾಗಲಿ ಹತ್ತೆಂಟು ಜನರು ಕೂಡಿ ಗಿಡವನ್ನು ಎತ್ತಿ ಮೇಲೆ ತೆಗೆಯಬೇಕು.

ಬಳಿಕ ಉಂಡೆಯು ಒಡೆಯದಂತೆ ಎಚ್ಚರದಿಂದ ಗಾಡಿಯಲ್ಲಿ ಹೇರಿ ಕೊಂಡು ಯಾವ ಸ್ಥಳದಲ್ಲಿ ನೆಡಬೇಕಾಗಿದೆಯೋ ಆ ಸ್ಥಳಕ್ಕೆ ಗಿಡವನ್ನು ಒಯ್ಯ ಬೇಕು. ಅಲ್ಲಿ ಇಷ್ಟರಲ್ಲೇ ಸಿದ್ಧಮಾಡಿ ಇಟ್ಟ ಕುಣಿಯಲ್ಲಿ ಗಿಡವನ್ನು ನಿಲ್ಲಿಸಿ, ಸುತ್ತಲೂ ಮಣ್ಣು ಒಟ್ಟಿ ಚನ್ನಾಗಿ ತುಳಿಯಬೇಕು. ಗಿಡವು ಗಾಳಿಯಿಂದ ಅಲ್ಲಾಡಿ ಕಿತ್ತು ಬೀಳಬಾರದೆಂದು ಎರಡು ಮೂರು ದಿಕ್ಕುಗಳಲ್ಲಿ ಉದ್ದನ್ನ ಗಳಗ ಳಿಂದಾಗಲಿ ಕಟ್ಟಿಗೆಗಳಿಂದಾಗಲಿ ಆಧಾರವನ್ನು ಮಾಡಿಕೊಡಬೇಕು. ಗಿಡದ ಬುಡದಲ್ಲಿ ಚನ್ನಾಗಿ ನೀರು ಹಾಕಬೇಕು. ಮುಂದೆ ದಿನಾಲು ಗಿಡಕ್ಕೆ ನೀರು ಹಾಕು ತ್ತಿರಬೇಕು. ಅದರ ಟೊಂಗೆಗಳಿಗೆ ಕಟ್ಟಿದ ಹುಲ್ಲು ಯಾವಾಗಲೂ ಹಸಿಯಾಗಿರ ಬೇಕೆಂದು, ದಿನಕ್ಕೆ ಎರಡಾವರ್ತಿ ಆದರೂ ಅದರ ಮೇಲೆ ನೀರು ಸಿಂಪಡಿಸಬೇಕು.

ಹೀಗೆ ಏರ್ಪಾಡು ಮಾಡಿದರೆ ಸುಮಾರು ಎರಡು ತಿಂಗಳುಗಳಲ್ಲಿ ಗಿಡವು ಚಿಗಿಯಲಾರಂಭಿಸುವದು ಮುಂದೆ ಒಂದೆರಡು ವರ್ಷಗಳಲ್ಲಿ ಅದರ ಬೆಳವಣಿ ಗೆಯು ಸ್ವಾಭಾವಿಕವಾಗಿ ಬೆಳೆದ ಗಿಡದಂತೆ ಆಗುವದು.

ಹತ್ತೆಂಟು ವರ್ಷಗಳ ವಯಸ್ಸಿನ ಗಿಡಗಳನ್ನು ಹೀಗೆ ಕಿತ್ತು ನೆಡುವದು ಸುಲಭವಾಗಬಹುದು. ಹೆಚ್ಚಿನ ವಯಸ್ಸಿನ ಗಿಡಗಳನ್ನು ನೆಡುವದು ಕಠಿಣವು. ಕಿತ್ತು ನೆಟ್ಟ ಗಿಡಗಳು ಎಲ್ಲವೂ ಬದುಕುತ್ತವೆಂಬ ನೇಮ ವಿಲ್ಲ.

ಸುಮಾರು ಹತ್ತು ವರ್ಷಗಳ ಗಿಡಗಳನ್ನು ಕಿತ್ತು, ಒಂದು ಮೈಲು ದೂರ ಒಯ್ದು ನೆಡುವದಾದರೆ ನಾಲ್ಕು ರೂಪಾಯಿ ವೆಚ್ಚವು ಬರುತ್ತದೆಂದು ತಿಳಿದು ಬಂದಿದೆ. ಆದ್ದರಿಂದ ಹೀಗೆ ಗಿಡಗಳನ್ನು ಕಿತ್ತು ನೆಡುವದು ಸಮೀಪದ ಸ್ಥಳಗ ಳಲ್ಲಿ ಮಾತ್ರವೇ ಸಾಧ್ಯವು.

**ಮಾವಿನ ಬೆಳೆಯು:**—ಮಾವಿನ ಮರಗಳು ಪ್ರತಿವರ್ಷ ಹೂಬಿಡುವ ದಿಲ್ಲ ಎಂಬದು ಸಾಮಾನ್ಯವಾಗಿ ತಿಳಿದ ಮಾತು. ಎರಡು ವರ್ಷಗಳಿಗೊಮ್ಮೆ ಅವು ಸರಿಯಾಗಿ ಫಲ ಕೊಡುತ್ತವೆಂದು ತಿಳಿಯುತ್ತಾರೆ. ಸೂಕ್ಷ್ಮವಾಗಿ ಪರೀಕ್ಷಿ

ಸಿದರೆ ಇದೂ ತಪ್ಪೆಂದು ಕಂಡು ಬರುವದು. ಒಳ್ಳೇ ಬೆಳೆಯು ಮೂರು ವರ್ಷ ಗಳಿಗೊಮ್ಮೆ ಬರುತ್ತದೆ. ಇದರ ಕಾರಣವು ಇನ್ನೂ ನಿಶ್ಚಿತವಾಗಿ ತಿಳಿದಿ ರುವದಿಲ್ಲ. ಆದಾಗ್ಯೂ ಮಾವಿನ ಮರಗಳು ಹೂ ಬಿಡುವದನ್ನೂ ಫಲ ಬಿಡುವದ ನ್ನೂ ಅಭ್ಯಾಸಮಾಡಿ ನೋಡಲಾಗಿ ಅವು ಒಂದು ವರ್ಷ ಹೂ ಬಿಟ್ಟವೆಂದರೆ ಎಲೆಗಳೆಲ್ಲ ಮುಚ್ಚಿ ಹೋಗುವಂತೆ ಹೂ ಬಿಡುತ್ತವೆ. ಈ ಹೂವುಗಳಲ್ಲಿ ನೂ ರಕ್ಕೆ ೪-೫ ರಂತೆ ಹೆಣ್ಣು, ೯೫-೯೬ ರಂತೆ ಗಂಡು, ಹೂವುಗಳಿರುತ್ತವೆಂದು ತಿಳಿದು ಬಂದಿದೆ. ಹೆಣ್ಣು ಹೂವುಗಳಲ್ಲೂ ನೂರಕ್ಕೆ ೫೦ ರಂತೆ ಮಿಡಿಹಿಡಿ ಯುತ್ತವೆ. ಇವುಗಳಲ್ಲಿ ಮುಂದೆ ಮಿಡಿಗಳು ಉದುರಿ ಹೋಗಿ, ಒಂದೊಂದು ಹೂವಿನ ಗುಚ್ಛಕ್ಕೆ ಒಂದು ಅಥವಾ ಎರಡು ಕಾಯಿಗಳು ಮಾತ್ರ ಬಲಿತು ಹಣ್ಣಾ ಗುತ್ತವೆ. ಊರ ಮಾವಿನ ಜಾತಿಗಳಲ್ಲಿ ಒಂದೊಂದು ಗುಚ್ಛಕ್ಕೆ ಹತ್ತೆಂಟು ಕಾಯಿಗಳು ಆಗುವದನ್ನು ನೋಡಬಹುದು. ಅವುಗಳಲ್ಲಿ ಹೂವಾಗುವದೂ ಅದೇ ಪ್ರಮಾಣದಲ್ಲಿ ಹೆಚ್ಚು. ಹೂ ಕಾಯಿಗಳಲ್ಲ ಮರದ ಸತ್ವವೆಲ್ಲ ಸೆಳೆದುಕೊಳ್ಳಲ್ಪಡು ತ್ತದೆ. ಆದ್ದರಿಂದ ಬಹಳ ಫಲ ಹಿಡಿದ ವರ್ಷದಲ್ಲಿ ಮರವು ಅಶಕ್ತ ವಾಗುತ್ತದೆ. ಈ ಅಶಕ್ತತೆಯಿಂದ ಅದರ ಮುಂದಿನ ವರ್ಷದಲ್ಲಿ ಫಲ ಹಿಡಿಯುವದು ಸಾಧ್ಯ ವಾಗುವದಿಲ್ಲ. ತಿರುಗಿ ಸಶಕ್ತವಾಗಲಿಕ್ಕೆ ಮರಕ್ಕೆ ಎರಡು ವರ್ಷಗಳು ಬೇಕಾಗು ವದರಿಂದ ಮಾವಿನ ಬೆಳೆಯು ಪ್ರತಿ ವರ್ಷ ಬರುವದಿಲ್ಲ ಎಂದು ತರ್ಕಿಸುತ್ತಾರೆ.

ಈ ಸ್ಥಿತಿಯಿಂದ ತೋಟಿಗನಿಗೆ ಎಷ್ಟೋ ಹಾನಿಯಾಗುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಇದನ್ನು ಹೋಗಲಾಡಿಸುವ ಉಪಾಯವು ಇನ್ನೂ ಸರಿಯಾಗಿ ತಿಳಿದಿಲ್ಲ. ಈ ವಿಷಯದಲ್ಲಿ ಆಗಬೇಕಾದಷ್ಟು ಪ್ರಯೋಗಗಳು ಇನ್ನೂ ಆಗಿಲ್ಲ. ಮಾವಿನ ಮರಗಳಿಗೆ ಪ್ರತಿ ವರ್ಷ ಸಾಕಷ್ಟು ಗೊಬ್ಬರ ನೀರುಗಳನ್ನು ದೊರಕಿಸಿ ಕೊಟ್ಟರೆ ಅವು ಪ್ರತಿ ವರ್ಷ ಫಲ ಕೊಡಬಹುದೆಂದು ತರ್ಕಿಸುತ್ತಾರೆ. ಈ ದೃಷ್ಟಿಯಿಂದ ಪ್ರಯತ್ನವು ನಡೆದಿರುತ್ತದೆ.

**ಮಾವಿನ ಹಣ್ಣುಗಳನ್ನು ಹರಿಯುವದು :—** ಮಾವಿನ ಹಣ್ಣುಗ ಳನ್ನು ಕಲ್ಲಿ ಕೊಕ್ಕೆಯಿಂದ ಹರಿಯುತ್ತಾರೆ. ಕೊಕ್ಕೆಯು ಸಪೂರಾದ ಉದ್ದನ್ನ ಬಿದುರಿನ ಕೋಲು. ಅದರ ತುದಿಗೆ ಬಿದುರಿನ ಪಟ್ಟಿಯನ್ನು ದುಂಡಗೆ ಮಣಿಸಿ ಸುಮಾರು ಒಂದು ಫೂಟು ವ್ಯಾಸದ ಉಂಗುರವನ್ನು ಮಾಡಿ ಕಟ್ಟುತ್ತಾರೆ. ಕೋ ಲಿನ ತುದಿಯನ್ನು ಉಂಗುರದ ನಡುವೆ ಸಮಭಾಗವಾಗಿ ಭೇದಿಸುವಂತೆ ಎರಡೂ ಪಕ್ಕಗಳಲ್ಲಿ ಕಟ್ಟುತ್ತಾರೆ. ಮತ್ತು ಕೋಲಿನ ತುದಿಗೆ ಎರಡು ಸಪೂರಾದ ಹಲ್ಲು ಗಳನ್ನು ಕಟ್ಟಿ, ಅವುಗಳ ಮತ್ತೊಂದು ತುದಿಯನ್ನು ಉಂಗುರದ ಪಟ್ಟಿಗೂ ಕಟ್ಟಿ ಬಿಡುತ್ತಾರೆ. ಸೆಣಬಿನಿಂದ ನೆಯ್ದು ಆಗಲಿ ಅರಿವೆಯನ್ನು ಹೊದ್ದಾಗಲಿ ಮಾಡಿದ

ಒಂದು ಸಣ್ಣ ಚೀಲವನ್ನು ಉಂಗುರದ ಪಟ್ಟಿಗೆ ಕಟ್ಟುತ್ತಾರೆ. ಹೀಗೆ ಮಾಡಿದ್ದಕ್ಕೆ ಕಲ್ಲಿ ಕೊಕ್ಕೆಯೆನ್ನುತ್ತಾರೆ. ಇದರಿಂದ ಎತ್ತರದ ಮೇಲಿದ್ದ ಹಣ್ಣುಕಾಯಿಗಳನ್ನು ನೆಲಕ್ಕೆ ಉದುರಗೊಡದೆ ಹರಿಯಬಹುದು. ಹಣ್ಣು ಕಾಯಿಗಳನ್ನು ಚೀಲದೊಳಕ್ಕೆ ಬರಮಾಡಿಕೊಂಡು ಕೊಕ್ಕೆಯ ಹಲ್ಲಿನಲ್ಲಿ ಅವುಗಳ ತೊಟ್ಟನ್ನು ಸಿಗಿಸಿ ಎಳೆದರೆ, ಅವು ಹರಿದು ಚೀಲದೊಳಕ್ಕೆ ಬೀಳುತ್ತವೆ. ಚೀಲವು ತುಂಬಿದ ಬಳಿಕ ಕೊಕ್ಕೆಯನ್ನು ಸರಿಸಿಕೊಂಡು ಅದರೊಳಗಿನ ಫಲಗಳನ್ನು ಇಳಿಸುವದು ಸುಲಭ.

ಈ ರೀತಿಯಲ್ಲಿ ಹರಿಯುವಾಗ ಫಲಗಳಿಗೆ ನೋವಾಗುವದಿಲ್ಲವೆಂಬದು ಹೌದು. ಆದರೆ ಅವುಗಳ ತೊಟ್ಟು ಮೈಗೆ ಹತ್ತಿ ಹರಿಯುವದರಿಂದ ಅದರ ಸೊನೆಯು ಸೋರಿ ಫಲಗಳ ಮೇಲೆ ಕಲೆಯಾಗುತ್ತದೆ. ಕಲೆಯಾದರೆ ಬಾಜಾರದಲ್ಲಿ ಹಣ್ಣುಗಳ ಬೆಲೆಯು ಕಡಿಮೆಯಾಗುತ್ತದೆ. ಅವು ಬಹುದಿನ ತಡೆಯುವದೂ ಇಲ್ಲ. ಒಂದೆರಡು ಇಂಚು ತೊಟ್ಟು ಉಳಿದರೆ ಹೀಗಾಗುವದಿಲ್ಲ. ಕಲ್ಲಿ ಕೊಕ್ಕೆಯಿಂದ ತೊಟ್ಟು ಇಟ್ಟು ಫಲಗಳನ್ನು ಹರಿಯುವದು ಕಠಿಣವಾಗುತ್ತದೆ. ಆಗುವದೇ ಇಲ್ಲವೆಂದರೂ ಸಲ್ಲುವದು. ಇದರಲ್ಲೇ ಚಿಕ್ಕದೊಂದು ಸುಧಾರಣೆಯಾಗಿದೆ. ಅಮೆರಿಕನ್ ಫ್ರುಟ್ ಹಾರ್ವೆಸ್ಟರ ಎಂಬದೇ ಹೀಗೆ ಸುಧಾರಿಸಿದ ಕೊಕ್ಕೆಯು. ಇದರಲ್ಲಿ ಕೊಕ್ಕೆಯ ಬುಡಕ್ಕೆ ಒಂದು ಸ್ಪ್ರಿಂಗಿನ ಹಿಡಿಕೆಯೂ, ತುದಿಯಲ್ಲಿ ಸಣ್ಣ ಕತ್ತರಿಯೂ ಇದ್ದು, ಅವೆರಡನ್ನು ಕಬ್ಬಿಣದ ತೆಳ್ಳನ್ನು ಸರಿಗೆಯಿಂದ ಜೋಡಿಸಿರುತ್ತಾರೆ. ಹಿಡಿಕೆಯನ್ನು ಒತ್ತಿದ ಕೂಡಲೆ ಕತ್ತರಿಯಿಂದ ಹಣ್ಣಿನ ತೊಟ್ಟು ಕತ್ತರಿಸಲ್ಪಡುತ್ತದೆ. ಹರಿಯುವಾಗ ಹಣ್ಣನ್ನು ಎಳೆಯುವ ಕಾರಣವಿಲ್ಲ. ಉಳಿದ ವ್ಯವಸ್ಥೆಯೆಲ್ಲ ಕಲ್ಲೀ ಕೊಕ್ಕೆಯಂತೆ ಇರುತ್ತದೆ ಅಮೇರಿಕೆಯಿಂದ ಇದನ್ನು ಇಲ್ಲಿಗೆ ತರಲು ೧೫ ರೂಪಾಯಿಗಳು ಬೇಕು. ಇದು ಬಹು ಸಾದಾ ತರದ್ದಿರುವದರಿಂದ ನಮ್ಮಲ್ಲೇ ರೂಪಾಯಿ ಎಂಟು ಆಣೆಗಳಲ್ಲಿ ಇದನ್ನು ಮಾಡಿಸಿ ಕೊಳ್ಳಬಹುದು.

**ಮಾವಿನ ಕಾಯಿಗಳನ್ನು ಹಣ್ಣಿಗೆ ಹಾಕುವದು :—**ಮಾವಿನ ಕಾಯಿಗಳು ಹೂಬಿಟ್ಟಂದಿನಿಂದ ಮೂರು ನಾಲ್ಕು ತಿಂಗಳುಗಳಲ್ಲಿ ಹಣ್ಣಾಗುತ್ತವೆ. ಹರಿಯುವಾಗ ಚನ್ನಾಗಿ ಪಾಡಿಗೆ ಬಂದ ಕಾಯಿಗಳನ್ನು ಆರಿಸಿ ಹರಿಯುತ್ತಾರೆ. ಮರದ ಮೇಲೆ ಹಣ್ಣಾಗ ಗೊಡುವದಿಲ್ಲ. ಪಾಡಿಗೆ ಬಂದ ಕಾಯಿಗಳು ಬಲಿತು ಬಿರುಸಾಗಿರುತ್ತವೆ. ಅವುಗಳ ಭುಜಗಳು ಉಬ್ಬಿ, ತೊಟ್ಟಿನ ಬುಡದ ಪಾತಳಿಯ ಮೇಲೆ ಬರುತ್ತವೆ. ಎಷ್ಟೋ ಜಾತಿಗಳಲ್ಲಿ ತೊಟ್ಟು ಮೇಲೇ ಉಳಿಯುತ್ತದೆ. ಕಾಯಿಗಳ ಮೇಲ್ಮೈಯು ಹುರುಕು ಬರಕು ಆಗಿ ಒಳಗಿನ ಗುಳವು ತುಂಬಿ ತೊಗಟೆಯು ಬಿರಿಯುವದೋ ಎಂಬಂತೆ ಕಾಣುತ್ತದೆ. ತೊಗಟೆಯ ಮೇಲೆ ತಿಳು

ವಾದ ಬೂದಿಯನ್ನು ಸಿಂಪಡಿಸಿದಂತೆ ಬಣ್ಣವು ಬರುತ್ತದೆ. ಸಣ್ಣ ಪುಟ್ಟ ಅರಿಶಿಣ ಬಣ್ಣದ ಚಿಕ್ಕೆಗಳು ಕಂಡು ಬರುತ್ತವೆ. ಈ ಲಕ್ಷಣಗಳನ್ನು ಕೈಗೆ ನಿಲುಕುವ ಕಾಯಿಗಳಲ್ಲಷ್ಟೇ ನೋಡಿ ಹರಿಯುವದು ಸಾಧ್ಯವು. ಎತ್ತರದ ಮೇಲಿದ್ದ ಕಾಯಿಗಳನ್ನು ಅಂದಾಜಿನ ಮೇಲೆ ಹರಿಯಬೇಕಾಗುತ್ತದೆ. ಸಾಮಾನ್ಯವಾಗಿ ಮರದಿಂದ ತಾವಾಗಿ ನಾಲ್ಕಾರು ಕಾಯಿಗಳು ಹಣ್ಣಾಗಿ ಉದುರಿದ ಬಳಿಕ, ಉಳಿದ ಕಾಯಿಗಳನ್ನು ಇಳಿಸಿಕೊಳ್ಳುತ್ತಾರೆ. ತೋಟಿಗನ ದೃಷ್ಟಿಯಿಂದ ಇದೇ ಮುಖ್ಯವಾದ ಸೂಚನೆಯಾಗಿರುತ್ತದೆ. ಎಷ್ಟೋ ಸಾರೆ ಕಾಗೆ, ಗಿಳಿ ಮುಂತಾದ ಹಕ್ಕಿಗಳು ಹಂಪಾದ ಕಾಯಿಗಳನ್ನು ಅರ್ದಮರ್ಧ ತಿಂದು ಮರದ ಮೇಲೆ ಬಿಟ್ಟದ್ದು ಕಂಡುಬರುತ್ತದೆ. ಇದರ ಮುಂದೆ ಹತ್ತೆಂಟು ದಿನಗಳಲ್ಲಿ ಕಾಯಿಗಳನ್ನು ಇಳಿಸಬಹುದು.

ಎಲ್ಲ ಕಾಯಿಗಳನ್ನು ಒಮ್ಮೆಲೇ ಇಳಿಸಬಾರದು. ಅವು ಪಾಡಿಗೆ ಬಂದಂತೆ ಆರಿಸಿ ಹರಿಯಬೇಕು. ಮತ್ತು ದೂರದ ಬಾಜಾರಗಳಿಗೆ ಕಳಿಸುವದಾದರೆ ತುಸು ಕಸಕ ಕಾಯಿಗಳನ್ನೇ ಹರಿಯ ಬೇಕಾಗುತ್ತದೆ. ಬಾಜಾರದ ಬೆಲೆಯನ್ನು ನೋಡಿ ಕಾಯಿಗಳನ್ನು ಹರಿಯಬೇಕು. ಹರಿದಿಟ್ಟ ಕಾಯಿಗಳಿಗಿಂತ ಮರದ ಮೇಲೆ ಇದ್ದ ಕಾಯಿಗಳು ಹೆಚ್ಚುಕಾಲ ತಡೆಯುತ್ತವೆ.

ಮಾವಿನ ಕಾಯಿಗಳನ್ನು ಹರಿದ ಬಳಿಕ ದೊಡ್ಡ, ಮಧ್ಯಮ, ಸಣ್ಣ ಆಕಾರದ ಕಾಯಿಗಳನ್ನು ಬೇರೆ ಬೇರೆ ಆರಿಸಿ ಬೇರೆ ಬೇರೆ ಬುಟ್ಟಿಗಳಲ್ಲಾಗಲಿ, ಪೆಟ್ಟಿಗೆಗಳಲ್ಲಾಗಲಿ ತುಂಬಿ ಪಾರ್ಸೆಲಿನಿಂದ ದೂರದ ಬಾಜಾರಗಳಿಗೆ ಕಳಿಸುತ್ತಾರೆ. ಮೂರು ನಾಲ್ಕು ದಿನಗಳ ಪ್ರವಾಸದಲ್ಲಿ ಅವು ಎಷ್ಟೋ ಹಣ್ಣಾಗುತ್ತವೆ. ಸಮೀಪದ ಬಾಜಾರಕ್ಕೆ ಕಳಿಸುವದಾದರೆ. ಕಾಯಿಗಳನ್ನು ಹಣ್ಣಿಗೆ ಹಾಕಿ, ಚನ್ನಾಗಿ ಬಣ್ಣವು ತಿರುಗಿದ ಬಳಿಕ ಬುಟ್ಟಿಗಳಲ್ಲಿ ತುಂಬಿ ಗಾಡಿಗಳಲ್ಲಾಗಲಿ ತಲೆ ಹೊರೆಯಿಂದಾಗಲಿ ಕಳಿಸುತ್ತಾರೆ.

ಹಣ್ಣಿಗೆ ಹಾಕುವಾಗ ತೇವಿಲ್ಲದ ಮತ್ತು ಗಾಳಿ ಆಡುತ್ತಿರುವ ಒಂದು ಕೋಣೆಯಲ್ಲಿ ಮೆತ್ತನ್ನ ಹುಲ್ಲು ಹಾಸಿ ಅದರ ಮೇಲೆ ಒಂಟಿ ಧರದಲ್ಲಿ ಒಂದಕ್ಕೊಂದು ಹತ್ತಿ ಕಾಯಿಗಳನ್ನು ಇಡುತ್ತಾರೆ, ಅವುಗಳ ಮೇಲೆ ಹುಲ್ಲು ಮುಚ್ಚುತ್ತಾರೆ. ಅವು ಒಂದೆರಡು ದಿನಗಳಲ್ಲೇ ಹಣ್ಣಾಗ ಬೇಕಾಗಿದ್ದರೆ, ಕೋಣೆಯ ಕಿಡಕಿ ಬಾಗಿಲುಗಳನ್ನೆಲ್ಲ ಮುಚ್ಚಿ, ಗಾಳಿಯಾಡದಂತೆ ಮಾಡುತ್ತಾರೆ. ಇದರಿಂದ ಕೋಣೆಯೊಳಗಿನ ಉಷ್ಣತೆಯು ಏರಿ ಕಾಯಿಗಳು ಬೇಗ ಹಣ್ಣಾಗುತ್ತವೆ. ಹೀಗೆ ಹಣ್ಣಾಗುವ ಕ್ರಮದಲ್ಲಿ ಕಾಯಿಗಳೊಳಗಿನ ಪಿಷ್ಟ ಪದಾರ್ಥವು ರಸಾಯನ ಕ್ರಿಯೆಯಿಂದ ಬದಲಿಸಿ ಸಕ್ಕರೆ ಯಾಗುತ್ತದೆ. ಗುಳವು ಮಿದುವಾಗುತ್ತದೆ. ತೊಗ

ಟೆಯು ತಿಳುವೂ ಮಿದುವೂ ಆಗಿ ಅದರ ಬಣ್ಣವು ಹೆಚ್ಚಗಿದ್ದದ್ದು ಅರಿಶಿಣವಾಗುತ್ತದೆ. ಚನ್ನಾಗಿ ಬೆಳೆದ ಕಾಯಿಗಳಲ್ಲಿ ಈ ಎಲ್ಲ ಕ್ರಿಯೆಗಳು ಒಂದೆರಡು ದಿನ ಬೇಗನೆ ಆಗುತ್ತವೆ. ಎಳೆ ಕಾಯಿಗಳಲ್ಲಿ ಹೆಚ್ಚು ಕಾಲವು ಬೇಕು.

ಇದು ಮೇಲ್ಜಾತಿಯ ಕಾಯಿಗಳನ್ನು ಹಣ್ಣಿಗೆ ಹಾಕುವ ರೀತಿಯು. ಊರ ಜಾತಿಯ ಹಣ್ಣುಗಳನ್ನು ಒಂದು ಥರ ಹುಲ್ಲು ಒಂದು ಥರ ಕಾಯಿ ಹೀಗೆ ಒಂದರ ಮೇಲೊಂದು ನಾಲ್ಕೈದು ಥರಗಳಲ್ಲಿ ಸಹ ಹಣ್ಣಿಗೆ ಹಾಕುತ್ತಾರೆ.

ಕಾಯಿಗಳನ್ನು ಹರಿದ ಬಳಿಕ ಮಾವಿನ ಎಲೆಗಳ ಹಾಸಿಗೆಯಲ್ಲಿ ಅವುಗಳನ್ನು ಒಂದೆರಡು ದಿನ ಗಾಳಿಗೆ ಹರಡಿ ಹಾಕುವದೂ ಉಂಟು. ಇದರಿಂದ ಅವು ಆರಿ ಹಣ್ಣಾಗಲಿಕ್ಕೆ ಸಿದ್ಧವಾಗುತ್ತವೆ. ಆ ಬಳಿಕ ಮೇಲೆ ಹೇಳಿದಂತೆ ಹಣ್ಣು ಮಾಡುತ್ತಾರೆ.

ಹಣ್ಣಾದ ಬಳಿಕ ಸಾಮಾನ್ಯವಾಗಿ ಅವು ನಾಲ್ಕಾರು ದಿನಗಳಲ್ಲಿ ಕೊಳೆಯಲಾರಂಭಿಸುತ್ತವೆ. ಕರೇ ಇಷಾಡು ಎಂಬ ಉತ್ತರ ಕನ್ನಡದ ಉತ್ತಮ ಜಾತಿಯ ಹಣ್ಣುಗಳು ಒಂದೇ ಒಂದು ದಿನ ಚನ್ನಾಗಿರುತ್ತವೆ. ಎರಡನೇ ದಿನ ಕೆಡಲಾರಂಭಿಸಿ ಮೂರು ನಾಲ್ಕು ದಿನಗಳಲ್ಲಿ ಕೊಳೆದು ಹೋಗುತ್ತವೆ. ಪಾಯರಿ ಹಣ್ಣುಗಳು ನಾಲ್ಕಾರು ದಿನಗಳು ಕೆಡುವದಿಲ್ಲ. ಆಫೂಸ ಹಣ್ಣುಗಳು ಹದಿನೈದು–ಇಪ್ಪತ್ತು ದಿನಗಳಾದರೂ ಗಳಿಯುವದಿಲ್ಲ. ದಿನಗಳು ಕಳೆದಂತೆ ಅವು ಒಣಗುತ್ತವೆ, ತೊಗಟೆಯಲ್ಲಿ ನೆರಿಗೆಗಳು ಬೀಳುತ್ತವೆ. ಕೊಳೆಯುವದಿಲ್ಲ. ಇಂಥ ಹಣ್ಣುಗಳನ್ನು ಬೇಕಾದಷ್ಟು ದೂರದ ಬಾಜಾರಗಳಿಗೆ ಕಳಿಸಬಹುದಲ್ಲವೇ ?

## ಮಾವಿನ ಹಣ್ಣುಗಳನ್ನು ಬಾಜಾರಕ್ಕೆ ಕಳಿಸುವದು :—

ಮಾವಿನ ಕಾಯಿಗಳನ್ನು ಹರಿದ ಕೂಡಲೆ ಬುಟ್ಟಿಗಳಲ್ಲಾಗಲಿ ಪೆಟ್ಟಿಗೆಗಳಲ್ಲಾಗಲಿ ತುಂಬಿ ದೂರದ ಬಾಜಾರಗಳಿಗೆ ಕಳಿಸುತ್ತಾರೆಂದು ಮೇಲೆ ಹೇಳಿದ್ದೇವೆ. ಹೀಗೆ ಕಳಿಸುವಾಗ ಬುಟ್ಟಿಯ ಬುಡದಲ್ಲಿ ಮಾವಿನ ಎಲೆಗಳನ್ನಾಗಲಿ ಹುಲ್ಲನ್ನಾಗಲಿ ಹಾಸಿ ಅದರ ಮೇಲೆ ಕಾಯಿಗಳನ್ನು ಒಂದೊಕ್ಕೊಂದು ಹತ್ತಿ ಇಡುತ್ತಾರೆ. ಈ ಥರದ ಮೇಲೆ ಮತ್ತೆ ಹುಲ್ಲು ಹಾಸಿ ಇನ್ನೊಂದು ಥರ ಕಾಯಿಗಳನ್ನು ಇಡುತ್ತಾರೆ. ಬುಟ್ಟಿಯು ತುಂಬುವ ವರೆಗೆ ಹೀಗೆ ಅನೇಕ ಥರಗಳು ಬರುತ್ತವೆ. ಬುಡದ ಥರಗಳು ಸಣ್ಣ ಕಾಯಿಗಳವು. ಮೇಲಿನ ಥರದಲ್ಲಿ ದೊಡ್ಡ ಆಕಾರದ ದರ್ಶನೀ ಕಾಯಿಗಳನ್ನು ಇಟ್ಟು, ಹುಲ್ಲು ಮುಚ್ಚಿ, ಅದರ ಮೇಲೆ ಬುಟ್ಟಿಯ ಮುಚ್ಚಳವನ್ನು ಕಟ್ಟಿ, ವಿಳಾಸವನ್ನು ಬರೆದು, ಉಗೆಬಂಡಿಯ ಪಾರ್ಸೆಲಿನಿಂದ ಕಳಿಸುತ್ತಾರೆ. ಸ್ಟೇಶನವು

ದೂರ ಇದ್ದರೆ ಬುಟ್ಟಿಗಳನ್ನು ಎತ್ತಿನ ಗಾಡಿಗಳಲ್ಲಿ ಅಲ್ಲಿಯ ತನಕ ಒಯ್ಯಬೇಕಾಗುತ್ತದೆ. ಎತ್ತಿನ ಗಾಡಿಗಳಲ್ಲೂ ಉಗೆ ಬಂಡಿಗಳಲ್ಲೂ ಏರಿಸುವಾಗಲೂ ಇಳಿಸುವಾಗಲೂ ಬುಟ್ಟಿಗಳನ್ನು ಎತ್ತಿ ಒಗೆದಾಡುವದರಿಂದ ಅವು ಮುರಿಯುತ್ತವೆ. ಒಡೆಯುತ್ತವೆ. ಒಳಗಿನ ಕಾಯಿಗಳಿಗೆ ಪೆಟ್ಟಾಗಿ ಅವು ಕೆಡುತ್ತವೆ. ಸಮುದ್ರ ದಂಡೆಯ ಊರುಗಳಿಂದ ಬುಟ್ಟಿಗಳನ್ನು ಕಳಿಸುವಾಗಂತೂ, ಬಂದರದ ಮೇಲೂ ಡೋಣಿ ಬೋಟಿಗಳಲ್ಲೂ ಬುಟ್ಟಿಗಳನ್ನು ಬಹು ಎತ್ತರದಿಂದ ಒಗೆದಾಡುವದನ್ನು ನೋಡಿದರೆ ಯಾರಿಗೂ ಕನಿಕರವುಂಟಾಗದೆ ಇರದು. ಈ ರೀತಿಯಲ್ಲಿ ಒದ್ದಾಡುತ್ತ ಪೇಠೆಗೆ (ಮುಂಬಯಿಗೆ) ಬಂದು ಮುಟ್ಟುವಷ್ಟರಲ್ಲಿ ಅರ್ಧಕ್ಕಿಂತ ಹೆಚ್ಚು ಕಾಯಿಗಳು ನಿರುಪಯೋಗವಾಗಿ ಕಳಿಸಿದ ತೋಟಿಗನಿಗೆ ಅಪಾರ ಹಾನಿಯಾಗುತ್ತದೆ. ಅಂಕೋಲೆಯಿಂದ ಸಾವಿರಗಟ್ಲೆ ಮಾವಿನ ಕಾಯಿಗಳನ್ನು ಬಿಡಿಯಾಗಿ ಎತ್ತಿನ ಗಾಡಿಗಳಲ್ಲಿ ಹೇರಿಕೊಂಡು ಹುಬ್ಬಳ್ಳಿ, ಧಾರವಾಡಗಳಿಗೆ ಮಾರಲಿಕ್ಕೆಂದು ತರುತ್ತಾರೆ. ಅಂಕೋಲೆಯಿಂದ ಹುಬ್ಬಳ್ಳಿಗೆ ಐದಾರು ದಿನಗಳ ಗಾಡಿಯ ಹಾದಿಯು. ಮಾವಿನ ಕಾಯಿಗಳು ಬಂದು ಮುಟ್ಟುವಷ್ಟರಲ್ಲಿ ಅವು ಹಾಳಾಗಿ ಗಾಡಿಯ ಭಾಡಿಗೆಯು ಕೂಡ ಹುಟ್ಟುತ್ತಿರುವದಿಲ್ಲ.

ಈ ದುಸ್ಥಿತಿಯನ್ನು ಹೋಗಲಾಡಿಸಲು ಪ್ರಯತ್ನವು ನಡೆದು, ಬುಟ್ಟಿಗಳ ಬದಲು ದೇವದಾರೀ ಪೆಟ್ಟಿಗೆಗಳನ್ನೂ ಕಬ್ಬಿಣದ ಟ್ರಂಕುಗಳನ್ನೂ ಉಪಯೋಗಿಸಿ ರತ್ನಾಗಿರಿಯಿಂದ ಮುಂಬಯಿಗೆ ಕಾಯಿಗಳನ್ನು ಕಳಿಸಿ ನೋಡಿದರು. ಇದರಿಂದ ಪೆಟ್ಟಿಗೆಗಳೇ ಹೆಚ್ಚು ಲಾಭಕರವೆಂದು ತಿಳಿದು ಬಂದಿದೆ. ಇವುಗಳನ್ನು ಉಪಯೋಗಿಸುವದಾದರೆ ತೋಟಿಗನು ಮೊದಲು ಹೆಚ್ಚು ವೆಚ್ಚವನ್ನು ಸಹಿಸಬೇಕು ಎಂಬದು ನಿಜ. ಆದರೆ ಬೋಟಿಯ ಆಳುಗಳು ಪೆಟ್ಟಿಗೆಗಳನ್ನು ಒಗೆದರೂ ಒಳಗಿನ ಕಾಯಿಗಳಿಗೆ ಬುಟ್ಟಿಯಲ್ಲಾಗುವಷ್ಟು ಪೆಟ್ಟಾಗುವದಿಲ್ಲ. ಪೆಟ್ಟಿಗೆಯಿಂದ ಕಳಿಸಿದ ಕಾಯಿಗಳಿಗೆ ಹೆಚ್ಚಿನ ವೆಚ್ಚವೆಲ್ಲ ಹೋಗಿ, ಬುಟ್ಟಿಯಲ್ಲಿ ಕಳಿಸಿದ್ದಕ್ಕಿಂತ ನೂರಕ್ಕೆ ಎರಡು ರೂಪಾಯಿ ಹೆಚ್ಚು ಬೆಲೆಯು ಬರುತ್ತದೆಂದು ತಿಳಿದು ಬಂದಿದೆ. ಅಲ್ಲದೆ ಬುಟ್ಟಿಗಳ ಹಣ್ಣು ದಾರಿಯ ಮೇಲೆ ಕಳವಾಗುತ್ತದೆ. ಪೆಟ್ಟಿಗೆಗಳಲ್ಲಿ ಕಳವಾದರೂ ಬಹಳ ಕಡಿಮೆ. ಆದ ಕಾರಣ, ವಾಹನದ ಏರ್ಪಾಡು ಬದಲಾಗುವ ವರೆಗೆ ಹಣ್ಣು ಕಾಯಿಗಳನ್ನು ತುಂಬಲಿಕ್ಕೆ ಬುಟ್ಟಿಗಳಿಂತ ಪೆಟ್ಟಿಗೆಗಳನ್ನೇ ಉಪಯೋಗಿಸುವದು ಹಿತಕರವು. ಪೆಟ್ಟಿಗೆಗಳನ್ನು ಮರದ ಪಟ್ಟಿಗಳನ್ನು ಸರಿಯಾದ ಅಂತರದಲ್ಲಿ ಜೋಡಿಸಿ ಒಳಗೆ ಗಾಳಿಯಾಡುವಂತೆ ಮಾಡಿಸಿಕೊಳ್ಳಬೇಕು. ೭೫ ರಿಂದ ೧೦೦ ಕಾಯಿಗಳನ್ನು ತುಂಬಬಹುದಾದ ಪೆಟ್ಟಿಗೆಯೊಂದಕ್ಕೆ ರತ್ನಾಗಿರಿಯಲ್ಲಿ ಹತ್ತು ಆಣೆಗಳ ಬೆಲೆಯಿರುತ್ತದೆ.

**ನಂಬರವಾರಿ :**—ಮಾವಿನ ಹಣ್ಣುಗಳನ್ನು ಅವುಗಳ ಆಕಾರ, ಬಣ್ಣ, ತೂಕ ಮುಂತಾದ ಗುಣಗಳನ್ನನುಸರಿಸಿ ಬೇರೆ ಬೇರೆಯಾಗಿ ಆರಿಸಿ ಪೆಟ್ಟಿಗೆಗಳಲ್ಲಿ ತುಂಬಿ ಮಾರಾಟಕ್ಕೆ ಕಳಿಸುವದಿಲ್ಲ. ಮೇಲೆ ಹೇಳಿದಂತೆ ಒಂದೇ ಬುಟ್ಟಿಯಲ್ಲಿ ಕೆಳಗಿನ ಥರಗಳಲ್ಲಿ ಸಣ್ಣ ಹಣ್ಣುಗಳೂ ಮೇಲಿನ ಥರಗಳಲ್ಲಿ ದೊಡ್ಡ ಹಣ್ಣುಗಳೂ ಇಡಲ್ಪಡುತ್ತವೆ. ಇದರಿಂದ ಪೇರೆಯಲ್ಲಿ ಮೇಲಿನ ಹಣ್ಣುಗಳಂತೆ ಇಡೀ ಬುಟ್ಟಿಯ ಹಣ್ಣುಗಳಿಗೆ ಬೆಲೆಯು ಬರುತ್ತದೆಂದು ತೋಟಿಗನು ತಿಳಿಯುತ್ತಾನೆ. ಆದರೆ ಪೇರೆಯ ಗಿರಾಕಿಗಳು "ನರಿಗಿಂತಲೂ ನರಿಯನ್ನು ಹಿಡಿಯುವವನು ಹೆಚ್ಚು ರಕ್ಕನು" ಎಂಬ ನ್ಯಾಯದಂತೆ, ಮೇಲಿನ ಹಣ್ಣುಗಳಿಗೂ ಕೆಳಗಿನ ಹಣ್ಣುಗಳ ದರದಂತೆ ಬೆಲೆಕಟ್ಟಿ ಬಿಡುತ್ತಾನೆ. ಇಷ್ಟೇ ಅಲ್ಲ. ಪೇರೆಯಲ್ಲಿ ಗಿರಾಕಿಗಳು ಬುಟ್ಟಿಯನ್ನು ಸುರುವಿದರೆ ಕೆಳಗಿನ ಸಣ್ಣ ಹಣ್ಣುಗಳು ರಾಶಿಯ ಮೇಲೆ ಬಂದು ವ್ಯಾಪಾರವನ್ನೇ ಕೆಡಿಸಿಬಿಡುತ್ತವೆ.

ತುಂಬುವಾಗ ಪ್ರತಿಯೊಂದು ಬುಟ್ಟಿಯಲ್ಲೂ ಕೆಲವು ಎಳೇ ಕಾಯಿಗಳೂ, ಕೆಲವು ಬಹಳ ಬೆಳೆದ ಕಾಯಿಗಳೂ ತುಂಬಲ್ಪಡುವದರಿಂದ, ಅವೆಲ್ಲ ಪೇರೆಗೆ ಮುಟ್ಟುವದರೊಳಗೆ ಸರಿಯಾಗಿ ಹಣ್ಣಾಗಿರುವದಿಲ್ಲ. ಪೇರೆಯಲ್ಲಿ ಅವನ್ನೆಲ್ಲ ಬೇರೆ ಬೇರೆ ಮಾಡಿ ಆರಿಸಿ ಮಾರಬೇಕಾಗುತ್ತದೆ. ಹೀಗೆ ಮಾಡುವಾಗ ದಲಾಲನು ಆದಷ್ಟು ತನ್ನ ಲಾಭವನ್ನು ಮಾಡಿಕೊಳ್ಳುತ್ತಾನೆ. ಈ ಎಲ್ಲ ದೃಷ್ಟಿಯಿಂದಲೂ ತೋಟಿಗನಿಗೆ ಹಾನಿಯಾಗುತ್ತದೆ.

ರತ್ನಾಗಿರಿಯಿಂದ ಆಫೂಸ ಜಾತಿಯ ಮಾವಿನ ಹಣ್ಣುಗಳನ್ನು ಮುಂಬಯಿಗೆ ಮಾರಾಟಕ್ಕೆ ಕಳಿಸುತ್ತಾರೆ. ಹಣ್ಣುಗಳನ್ನು ಮೇಲೆ ಹೇಳಿದಂತೆ ಬುಟ್ಟಿಯಲ್ಲಿ ತುಂಬಿ ಕಳಿಸುತ್ತಿದ್ದರು. ಬುಟ್ಟಿಗಳಿಂದಾಗುವ ಹಾನಿಯನ್ನು ಅಲ್ಲಿಯ ಜನರು ಅರಿತು, ಈಗ ಬಹುಶಃ ಎಲ್ಲರೂ ಪೆಟ್ಟಿಗೆಗಳಲ್ಲೇ ಕಳಿಸುತ್ತಾರೆ. ಅದರಂತೆ ನಂಬರವಾರಿಯನ್ನು ಮಾಡಿ ಆರಿಸಿ ತುಂಬುವ ಪದ್ಧತಿಯೂ ಬೆಳೆಯುತ್ತಿದೆ. ಸಾಧಾರಣ ೧೦೦೦ ಮಾವಿನ ಕಾಯಿಗಳ ರಾಶಿಯಲ್ಲಿ ೧೫೦ ಮೊದಲನೇ ವರ್ಗದ ಅಂದರೆ ೨೮ ತೊಲೆಗಳಿಗಿಂತ ಹೆಚ್ಚಿನ ತೂಕದ ಕಾಯಿಗಳೂ, ೪೫೦ ಎರಡನೇ ವರ್ಗದ ಅಂದರೆ ೨೪ ರಿಂದ ೨೮ ತೊಲೆಗಳ ವರೆಗಿನ ತೂಕದ ಕಾಯಿಗಳೂ, ೪೦೦ ಮೂರನೇ ವರ್ಗದ ಅಂದರೆ ೧೮ ರಿಂದ ೨೪ ತೊಲೆಗಳ ವರೆಗಿನ ತೂಕದ ಕಾಯಿಗಳೂ ಇರುತ್ತವೆಂದು ಪ್ರತ್ಯಕ್ಷ ಅನುಭವದಿಂದ ತಿಳಿದುಬಂದಿದೆ. ಇಡೀ ರಾಶಿಯ ಕಾಯಿಗಳನ್ನು ಆರಿಸದೆ ಗುತ್ತಿಗೆಯಿಂದ ಮಾರಿದರೆ ಮುಂಬಯಿಯಲ್ಲಿ ಸಾವಿರಕ್ಕೆ ೧೦೬ ರೂಪಾಯಿಗಳು ಬಂದವು. ಮೊದಲನೇ ಎರಡನೇ ಮೂರನೇ ವರ್ಗದ ಕಾಯಿಗಳನ್ನು ಆರಿಸಿ ಬೇರೆ ಮಾಡಿ ಮಾರಲಾಗಿ ೧೨೭ ರೂಪಾಯಿ

೧೩ ಆಣೆಗಳು ಬಂದವು. ಅಂದರೆ ೨೧ ರೂಪಾಯಿ ೧೩ ಆಣೆಗಳು ಹೆಚ್ಚು ಬಂದವು. ಇದರಿಂದ ಮಾವಿನ ಕಾಯಿಗಳಲ್ಲಿ ಬೇರೆ ಬೇರೆ ವರ್ಗಗಳನ್ನು ಮಾಡಿ ಮಾರುವದರಿಂದ ತೋಟಿಗನಿಗೆ ಆಗುವ ಲಾಭವನ್ನು ತಿಳಿದುಕೊಳ್ಳಬಹುದು. ಇದಲ್ಲದೆ ಪೇರೆಯಲ್ಲಿ ದಲಾಲರು ಮಾಡುತ್ತಿರುವ ಮೋಸವು ತಪ್ಪುವದು.

**ಮಾವಿನ ಹಣ್ಣುಗಳ ಮಾರಾಟ :**—ಸಾಮಾನ್ಯವಾಗಿ ನೂರಕ್ಕೆ ನಾಲ್ವೈದಕ್ಕಿಂತ ಹೆಚ್ಚು ತೋಟಿಗರು ಸ್ವತಃ ಮಾವಿನ ಹಣ್ಣುಗಳನ್ನು ಪೇರೆಗೆ ಕಳಿಸಿ ಮಾರುವದಿಲ್ಲ. ಅವರು ತಮ್ಮ ಮರಗಳನ್ನು ಬಾಗವಾನರೆಂದು ಕರೆಯಲ್ಪಡುವ ಸಣ್ಣ ದೊಡ್ಡ ಕಂತ್ರಾಟದಾರರಿಗೆ ಕಾಯಿಗಳು ಇನ್ನೂ ಪಾಡಿಗೆ ಬರುವದರೊಳಗೇ ಇಂತಿಷ್ಟಕ್ಕೆಂದು ನಿರ್ಣಯಿಸಿ ಮಾರಿ ಬಿಡುತ್ತಾರೆ. ಆ ಬಳಿಕ ಕಾಯಿಗಳನ್ನು ತುಡುಗರಿಂದ ಕಾದುಕೊಳ್ಳುವದೂ, ಹರಿಯುವದೂ, ತುಂಬಿ ಪೇತೆಗೆ ಕಳಿಸುವದೂ ಬಾಗವಾನರ ಕೆಲಸವು. ನಡುವೆ ಗಾಳಿ ಮಳೆಗಳಾಗಿ ಹಾನಿಯಾದರೆ ಅದೂ ಬಾಗವಾನರಿಗೇ. ಅವರು ಕಾಯಿಗಳನ್ನು ಹಣ್ಣಿಗೆ ಹಾಕಿ ಸ್ಥಳದ ಮೇಲೂ ಮಾರುತ್ತಾರೆ. ಆದರೆ ಉತ್ತಮ ಹಣ್ಣುಗಳೆಲ್ಲ ಮುಖ್ಯವಾಗಿ ದೊಡ್ಡ ಶಹರಗಳಿಗೆ ಕಳಿಸಲ್ಪಡುತ್ತವೆ. ಶಹರಗಳಲ್ಲಿ ಹಣ್ಣಿನ ದಲಾಲರು ತಮ್ಮ ಹೆಸರಿಗೆ ಬಂದ ಬುಟ್ಟಿಗಳನ್ನೆಲ್ಲ ಪೇಠೆಯ ದರದಂತೆ ಚಿಲ್ಲರೆ ವ್ಯಾಪಾರಿಗಳಿಗೆ ಮಾರುತ್ತಾರೆ. ಮಾರುವಾಗ ಒಲ್ಲಿಯ ನೆರಿಗಿನಲ್ಲಿ ಕಯ್ಯಲ್ಲಿ ಕೈ ಹಾಕಿ ದರವನ್ನು ನಿಶ್ಚಯಿಸುತ್ತಾರೆ. ಇದರಿಂದ ದಲಾಲರು ತಮಗೆ ಬೇಕಾದ ವ್ಯಾಪಾರಿಗೆ ಬೇಕಾದ ದರದಿಂದ ಬುಟ್ಟಿಗಳನ್ನು ಮಾರಬಹುದು. ಸುತ್ತಲೂ ನಿಂತಿದ್ದ ಇತರ ವ್ಯಾಪಾರಿಗಳಿಗೆ ಮಾರಿದ ದರವು ತಿಳಿಯುವದಿಲ್ಲ. ಅವರು ಹೆಚ್ಚಿನ ಬೆಲೆಯನ್ನು ಕೊಡುವಂತಿದ್ದರೂ ಕಡಿಮೆ ಬೆಲೆಗೆ ಹಣ್ಣಿನ ಬುಟ್ಟಿಗಳು ಮಾರಾಟವಾಗುವದೂ ಉಂಟು. ಒಂದೇ ದಿನ ಒಂದೇ ಪೇರೆಯಲ್ಲಿ ಒಂದೇ ತರದ ಹಣ್ಣುಗಳು ಮಾರಾಟವಾದ ದರಗಳಲ್ಲಿ ನೂರಕ್ಕೆ ಮೂವತ್ತು ನಾಲ್ವತ್ತರ ವರೆಗೆ ಹೆಚ್ಚುಕಡಿಮೆ ಆಗ ಬಹುದು. ಇದರಿಂದ ದಲಾಲರಿಗೆ ಹಾನಿ ಏನೂ ಇಲ್ಲ. ಅವರ ದಲಾಲಿಯೂ ಇತರ ಲಾಭಗಳೂ ಅವರಿಗೆ ಬಂದೇ ಬರುತ್ತವೆ. ಹಣ್ಣುಗಳನ್ನು ಪೇತೆಗೆ ಕಳಿಸಿದವನಿಗೆ ಮಾತ್ರ ಲಾಭವೆಲ್ಲ ನೊನ್ನೆ. ದಲಾಲನು ಕಳಿಸಿದಷ್ಟು ಅವನು ತಕ್ಕೊಂಡಷ್ಟು. ಅದರಲ್ಲೂ ದಾರಿಯಲ್ಲಿ ಹಣ್ಣುಗಳು ಕಡುತ್ತವೆಂಬದು ದಲಾಲನಿಗೇ ಅನುಕೂಲ.

ಹಣ್ಣುಗಳನ್ನು ಪೇತೆಗೆ ಕಳಿಸುವವರು ಕೆಳಗೆ ತೋರಿಸಿದಂತೆ ವೆಚ್ಚವನ್ನು ಸಹಿಸಬೇಕಾಗುತ್ತದೆ.

ತುಂಬುವದಕ್ಕೆ—ಬುಟ್ಟಿ, ಅಥವಾ ಪೆಟ್ಟಿಗೆ, ಹುಲ್ಲು, ಕತ್ತ, ಮೊಳೆಗಳು, ವಿಳಾಸದ ಕಾಗದ ಮುಂತಾದವುಗಳ ಬೆಲೆ, ರೂ. ೦-೮-೦ ಇಂದ ೧-೦-೦

ಉಗೆಬಂಡಿಯ ಸ್ಟೇಶನ್ನಿಗೆ ಕಳಿಸುವದಕ್ಕೆ—ತಲೆಹೊರೆಯ ಮೇಲಾಗಲಿ, ಎತ್ತಿನ ಗಾಡಿ ಅಥವಾ ಮೊಟಾರುಗಳಲ್ಲಾಗಲಿ ಮೈಲಿಗೆ ಒಂದಾಣೆಯಂತೆ ... ... ರೂ. ೦–೨–೦

ಉಗೆಬಂಡಿಯ ಸ್ಟೇಶನ್ನಿನಲ್ಲಿ ಕೂಲಿ, ಮುಂ.— ಸ್ಟೇಶನ್ನಿನೊಳಗೆ ಒಯ್ದು ತೂಕ ಮಾಡಿ, ಉಗೆಬಂಡಿಯಲ್ಲಿಡಲಿಕ್ಕೆ, ಪೆಟ್ಟಿಗೆಗೆ ಒಂದಾಣೆಯಂತೆ ... ... ರೂ. ೦–೧–೦

ಉಗೆಬಂಡಿಯ ಸ್ಟೇಶನ್ನಿನಲ್ಲಿ ಪಾರ್ಸೆಲ ಕಾರಕೂನರಿಗೆ ಕಾಣಿಕೆ ರೂ. ೦–೧–೦

ಉಗೆಬಂಡಿಯ ಚಾರ್ಜು—ಒಂದು ಮಣಕ್ಕೆ (೮೦ ರತ್ತಲು) ೧೦೦ ಮೈಲುಗಳಿಗೆ ... ... ರೂ. ೧–೦–೦

ಶಹರದಲ್ಲಿ ಉಗೆಬಂಡಿಯ ಸ್ಟೇಶನ್ನಿನಿಂದ ಮಾರ್ಕೀಟಿಗೆ ಒಯ್ಯುವ ಕೂಲಿ—ಪೆಟ್ಟಿಗೆಗೆ ಮೈಲಿಗೆ ಒಂದಾಣೆಯಂತೆ ... ರೂ. ೦–೧–೦

ಮುನಿಸಿಪಾಲಿಟಿ, ಪೋರ್ಟ ಟ್ರಸ್ಟ ಮುಂ. ಸುಂಕ ... ರೂ. ೦–೧–೦

ಮಾರ್ಕೀಟಿನಲ್ಲಿ :—

| | | ರೂ.ಆ.ಪೈ. |
|---|---|---|
| ಜಾಗದ ಭಾಡಿಗೆ | ... | ೦–೧–೦ |
| ತೂಕದ ಭಾಡಿಗೆ (ಕಾಟಾ ಭಾಡಿಗೆ) | ... | ೦–೦–೬ |
| ದಲಾಲಿ | ... | ೦–೪–೦ |
| ಹಮಾಲಿ | ... | ೦–೧–೦ |
| ಧರ್ಮಾದಾಯಿ | ... | ೦–೧–೦ |
| | | ೦–೭–೬ |

ರೂ. ೦–೭–೬

ದಲಾಲನು ಹಣ್ಣುಗಳನ್ನು ಮಾರಿದ ಬಳಿಕ ಕಳಿಸಿದವನಿಗೆ ಬರೆದ ಪತ್ರಕ್ಕೆ ಅಂಚೆ ವೆಚ್ಚ ... ... ರೂ. ೦–೧–೩

ಒಟ್ಟು ರೂ. ೨–೧೪–೯

ಹೀಗೆ ಒಟ್ಟಿಗೆ ಪ್ರತಿಯೊಂದು ಪೆಟ್ಟಿಗೆಗೆ ಸುಮಾರು ಮೂರು ರೂಪಾಯಿಗಳು ವೆಚ್ಚವಾಗ ಬೇಕಾಗುತ್ತವೆ. ಈ ಲೆಖ್ಖದಲ್ಲಿ ತೋಟದಿಂದ ಉಗೆ ಬಂಡಿಯ ಸ್ಟೇಶನ್ನವು ಎರಡು ಮೈಲು, ಶಹರವು ಸುಮಾರು ೧೦೦ ಮೈಲು, ಶಹರದ ಸ್ಟೇಶನ್ನಿನಿಂದ ಮಾರ್ಕೀಟು ಒಂದು ಮೈಲು, ಪೆಟ್ಟಿಗೆಯ ಒಟ್ಟು ಭಾರವು ಒಂದು ಮಣ (೮೦ ರತ್ತಲು) ಇರುತ್ತವೆಂದು ತಿಳಿದಿದ್ದೇವೆ. ಇವುಗಳಲ್ಲಿ ಹೆಚ್ಚು ಕಡಿಮೆ

ಯೊದಂತೆ ವೆಚ್ಚದಲ್ಲೂ ಹೆಚ್ಚು ಕಡಿಮೆಯಾಗುತ್ತದೆಂಬದು ಸಹಜ. ಪೇರಿಯಲ್ಲಿ ಪೆಟ್ಟಿಗೆಯು ಮಾರುವ ದರವು ಮಾತ್ರ ಬದಲಾಗುವದಿಲ್ಲ. ಅಂದರೆ ದೂರದ ಹಳ್ಳಿಯಿಂದ ಬಂದ ಪೆಟ್ಟಿಗೆಗೆ ಬರುವ ದರವೂ, ಸಮೀಪದ ಹಳ್ಳಿಯಿಂದ ಬಂದ ಪೆಟ್ಟಿಗೆಗೆ ಬರುವ ದರವೂ ಒಂದೇ. ಪೆಟ್ಟಿಗೆಗಳು ಒಂದೇ ದರದಿಂದ ಮಾರಲ್ಪಟ್ಟರೂ ದೂರದ ಹಳ್ಳಿಯವನಿಗೆ ಆಗುವ ವೆಚ್ಚವು ಹೆಚ್ಚು. ಉಳಿತಾಯವು ಕಡಿಮೆ. ಇದನ್ನುಳಿದು ದಲಾಲರು ಮಾಡುವ ಮರೆ ಮೋಸಗಳೂ ಹಣ್ಣು ಕೆಟ್ಟು ಹಾನಿಯಾಗುವದೂ ಬೇರೆ. ಪೇರೆಯಲ್ಲಿ ಬರುವ ದರದಲ್ಲಿ ಈ ವೆಚ್ಚವೂ, ಹಣ್ಣುಗಳ ಮೂಲ ಬೆಲೆಯೂ ಬಂದು ಲಾಭವಾಗಬೇಕು ಈ ಲಾಭವು ತಿರುಕನ ಕನಸಿನಂತೆ ಎಂದೂ ದೊರೆಯುವದಿಲ್ಲವೆಂದರೆ ತಪ್ಪಾಗಲಾರದು.

ಮುಂಬಯಿಯಲ್ಲಿ ಮಾವಿನ ಹಣ್ಣುಗಳಿಗೆ ಸಾಮಾನ್ಯವಾಗಿ ಬರುವ ದರವನ್ನು ಈ ಕೆಳಗಿನ ಕೋಷ್ಟಕದಿಂದ ತಿಳಿಯ ಬಹುದು.

## ೧೦೦ ಮಾವಿನ ಹಣ್ಣುಗಳ ಠೋಕ ದರವು :

| ಜಾತಿಯ ಹೆಸರು | ಸರಾಸರಿ ಹಂಗಾಮಿನಲ್ಲಿ ಬರುವ ದರ | ಹಂಗಾಮು ಆರಂಭವಾಗುವ ಮೊದಲು ಅಥವಾ ಹಂಗಾಮು ತೀರಿದ ಬಳಿಕ ಬರುವ ದರ | ನಡು ಹಂಗಾಮಿನಲ್ಲಿ ಬರುವ ದರ |
|---|---|---|---|
| | ರೂ.ಆ.ಪೈ. | ರೂ.ಆ.ಪೈ. | ರೂ.ಆ.ಪೈ. |
| ಆಫೂಸ ... | ೧೦–೦–೦ | ೨೦–೦–೦ ರಿಂದ ೨೫–೦–೦ | ೬–೦–೦ |
| ಪಾಯರಿ ... | ೬–೦–೦ | ೧೦–೦–೦ ರಿಂದ ೧೨–೦–೦ | ೪–೦–೦ |
| ಊರ ಮಾವು ... | ೩–೦–೦ | ೪–೦–೦ | ೧–೮–೦ |

ಮಾವಿನ ಬೆಳೆಯಲ್ಲಿ ನೂರಕ್ಕೆ ಐದರಿಂದ ಹತ್ತರ ವರೆಗೆ ಹಂಗಾಮಿನ ಪೂರ್ವದಲ್ಲಿ ಅಥವಾ ಅಂತ್ಯದಲ್ಲೂ, ಮೂವತ್ತರಿಂದ ನಾಲ್ವತ್ತರ ವರೆಗೆ ನಡು ಹಂಗಾಮಿನಲ್ಲೂ, ಉಳಿದ ಭಾಗವು ಸರಾಸರಿ ಹಂಗಾಮಿನಲ್ಲೂ ಪೇಠೆಗೆ ಬಂದು ಮಾರಲ್ಪಡುತ್ತವೆಂದು ತಿಳಿಯಬಹುದು. ಇದರಿಂದ ಹಣ್ಣುಗಳ ಮಾರಾಟದಲ್ಲಾಗುವ ಲಾಭಹಾನಿಗಳನ್ನು ಅರಿಯಬಹುದು. ಮೇಲ್ಜಾತಿಯ ಹಣ್ಣುಗಳನ್ನು ಮಾತ್ರ ದೂರದ ಶಹರಗಳಿಗೆ ಕಳಿಸಿದರೆ ಸ್ವಲ್ಪಾದರೂ ಉಪಯೋಗವಾಗುವದು.

**ವಿಲಾಯತಿಗೆ ಮಾವಿನ ಹಣ್ಣುಗಳನ್ನು ಕಳಿಸುವದು :—** ಮಾವಿನ ಮರಗಳು ಉಷ್ಣ ಕಟಿ ಬಂಧದಲ್ಲೇ ಬೆಳೆಯುವದರಿಂದ ವಿಲಾಯತಿ ಯಂಥ ತಂಪುದೇಶಗಳಲ್ಲಿ ಮಾವಿನ ಹಣ್ಣುಗಳು ದೊರೆಯುವದಿಲ್ಲ. ಹಿಂದು ಸ್ಥಾನದಂಥ ದೂರ ದೇಶದಿಂದ ಅವುಗಳನ್ನು ಅಲ್ಲಿಗೆ ಕಳಿಸುವದು ಬಹಳ ಕಠಿಣ ವಾಗಿತ್ತು. ಹಿಂದುಸ್ಥಾನದಿಂದ ವಿಲಾಯಿತಿಗೆ ಹೋಗಲಿಕ್ಕೆ ೧೫-೨೦ ದಿನಗಳು ಬೇಕು. ಇದಿಷ್ಟು ಕಾಲ ಹಣ್ಣುಗಳು ಕೆಡದೆ ಇರುವದಿಲ್ಲ. ಹೀಗಾಗಿ ಮಾವಿನ ಹಣ್ಣುಗಳೆಂದರೆ ವಿಲಾಯತಿಯವರಿಗೂ ಇತರ ಯುರೋಪದ ದೇಶದವರಿಗೂ ಏನೆಂಬದು ಗೊತ್ತಿದ್ದಿಲ್ಲ. ಇಂಥ ಉತ್ಕೃಷ್ಟ ಹಣ್ಣುಗಳನ್ನು ಆ ದೇಶಗಳಿಗೆ ಕಳಿಸಿ ಮಾರಿದರೆ ಹೆಚ್ಚಿನ ಬೆಲೆಯು ಬರಬಹುದೆಂದು ಈಗ ಸುಮಾರು ಹತ್ತು ವರ್ಷಗಳಿಂದ ಪ್ರಯೋಗಗಳು ನಡೆದಿರುತ್ತವೆ. ಈ ಪ್ರಯೋಗಗಳಿಗೆ ಸಂಪೂರ್ಣ ಯಶಸ್ಸು ದೊರೆತಿರುತ್ತದೆ.

ಮಾವಿನ ಹಣ್ಣುಗಳು ಬರ್ಫದ ಕೋಣೆಗಳಲ್ಲಿ ೩೮ ರಿಂದ ೪೦ ಅಂಶ (ಫಾರೀನಹಾಯಿಟ)ಗಳ ಉಷ್ಣತೆಯಲ್ಲಿ ಒಂದು ತಿಂಗಳು ಕೆಡದೆ ಇದ್ದಕ್ಕಿದ್ದ ಹಾಗೇ ಇರುತ್ತವೆ ಎಂದು ಮೊದಲಿನ ಪ್ರಯೋಗಗಳಿಂದ ತಿಳಿದು ಬಂತು. ಮುಂದೆ ಇಷ್ಟು ಕಡಿಮೆ ಉಷ್ಣತೆಯ ಸ್ಥಳವು ವಿಲಾಯತಿಗೆ ಹೋಗುವ ಉಗೆ ಹಡಗಗಳಲ್ಲಿ ದೊರೆಯುವದೋ ಇಲ್ಲವೋ ಎಂಬದನ್ನು ಕುರಿತು ವಿಚಾರ ವಿನಿಮಯವಾಗಿ, ಇದ ಕ್ಕಿಂತಲೂ ತುಸು ಹೆಚ್ಚಿನ ಉಷ್ಣತೆಯ ಸ್ಥಳವು ದೊರೆಯುತ್ತದೆಂದು ತಿಳಿದು ಬಂತು. ಆ ಹಡಗಗಳಲ್ಲಿ "ಪರ್ಸರ್ಸ್ ಕೂಲ್ ರೂಮ್" ಎಂಬ ಸ್ಥಳವು ಮಾವಿನ ಹಣ್ಣುಗಳಿಗೆ ಅನುಕೂಲವೆಂದು ಆರಿಸಲ್ಪಟ್ಟಿತು. ಇದಾದ ಮೇಲೆ ವಿಲಾಯತಿಯಂಥ ಬಹುದೂರದ ಪ್ರಯಾಣಕ್ಕೆ ಯೋಗ್ಯವಾಗುವಂತೆ ಮಾವಿನ ಹಣ್ಣುಗಳನ್ನು ಯಾವ ತರದ ಪೆಟ್ಟಿಗೆಗಳಲ್ಲಿ ಹ್ಯಾಗೆ ತುಂಬ ಬೇಕೆಂಬ ದೃಷ್ಟಿಯಿಂ ದಲೂ ಪ್ರಯೋಗಗಳು ನಡೆದ ಬಳಿಕ, ಸಣ್ಣ ಸಣ್ಣ ಉದ್ದನ್ನ ಪೆಟ್ಟಿಗೆಗಳಲ್ಲಿ ಗಾಳಿ ಯಾಡಲಿಕ್ಕೆ ಅಸ್ಪದವಿಟ್ಟು, ಒಂಟಿ ಥರದಲ್ಲಿ ಕಾಯಿಗಳನ್ನು ತುಂಬಿ ಕಳಿಸಿದರೆ ಅವು ಕೆಡುವದಿಲ್ಲವೆಂದು ತಿಳಿದು ಬಂತು. ಅದರಲ್ಲೂ ಮಾವಿನ ಜಾತಿಗಳಲ್ಲಿ ಅತಿ ಶ್ರೇಷ್ಠವಾದ 'ಆಫೂಸ' ಜಾತಿಯನ್ನು ಮಾತ್ರ ಹೀಗೆ ಕಳಿಸುವದು ಸಾಧ್ಯ ವಾಯಿತು.

ಪಾಶ್ಚಿಮಾತ್ಯರು ಹಣ್ಣುಗಳನ್ನು ಎಷ್ಟು ಪ್ರೀತಿಸುತ್ತಾರೆಂಬದು ಎಲ್ಲರಿಗೂ ತಿಳಿದ ವಿಷಯವು. ಅವರು ತಮ್ಮ ಸೇವು ಹಣ್ಣು, ಪೀಚ, ಪೇಅರ, ಕಿತ್ತಳೆ ಮುಂ ತಾದ ಹಣ್ಣುಗಳನ್ನು ಬಿಟ್ಟು ನಮ್ಮ ಮಾವಿನ ಹಣ್ಣುಗಳನ್ನು ಕೊಳ್ಳುವಂತೆ ಮಾ ಡುವದಕ್ಕೆ ಮಾವಿನ ಹಣ್ಣಿನ ಸೌಂದರ್ಯ ರುಚಿ ಸೌಷ್ಠವಗಳಲ್ಲದೆ, ಅದರಲ್ಲಿದ್ದ

ಪೌಷ್ಟಿಕ ಗುಣವೂ, ವ್ಹಿಟಾಮಿನ ಎಂದು ಕರೆಯಲ್ಪಡುವ ಚೈತನ್ಯದಾಯಕ ಪದಾರ್ಥವೂ ಸಹಾಯವಾದವು. ಈ ಗುಣಗಳನ್ನು ನಿಶ್ಚಯಿಸಲಿಕ್ಕೆ ಲಂಡನದ 'ಲಿಸ್ಟರ' ಸಂಸ್ಥೆಯ ಪ್ರಖ್ಯಾತ ಡಾಕ್ಟರ ಝಿಲ್ವಾ ಎಂಬವರು ಪ್ರಯೋಗಗಳನ್ನು ನಡೆಸಿ, ಆಫೂಸ ಮಾವಿನ ಹಣ್ಣಿನಲ್ಲಿ ವಿಲಾಯತಿಯ ಅತ್ಯುತ್ತಮ ಜಾತಿಯ ಸೇವು ಹಣ್ಣಿಗಿಂತ ಆರುಪಡಿ ಹೆಚ್ಚಿಗೆ "ಸಿ" ವ್ಹಿಟಾಮಿನ ದ್ರವ್ಯವೂ, ಸಾಕಷ್ಟು "ಎ" ವ್ಹಿಟಾಮಿನ ದ್ರವ್ಯವೂ ಇರುತ್ತದೆಂದು ಪ್ರಕಟಿಸಿದರು.* ಇದರಿಂದಂತೂ ಆ ದೇಶದ ಜನರು ಮಾವಿನ ಹಣ್ಣನ್ನು ಎಂದು ಕಂಡೇವೆಂದು ಹಾತೊರೆಯ ಹತ್ತಿದರು !

ಈ ಕಾರ್ಯವನ್ನು ಮುಂದರಿಸಿ ಮುಂಬಯಿ ಸರಕಾರದ ಹಣ್ಣು ಹಂಪಲ ಗಳ ತಜ್ಞರಾದ ಡಾಕ್ಟರ ಚೀಮಾ ಸಾಹೇಬರು ಬಹು ಪರಿಶ್ರಮದಿಂದ ೧೯೩೨ ನೇ ಸಾಲಿನ ಮಾವಿನ ಹಣ್ಣಿನ ಹಂಗಾಮಿನಲ್ಲಿ ಒಂದೇ ಸವನೆ ಒಂಭತ್ತು ವಾರಗಳ ತನಕ ಪ್ರತಿ ವಾರ ಒಂದು ಸಾವಿರ ಆಫೂಸ ಮಾವಿನ ಹಣ್ಣುಗಳನ್ನು ವಿಲಾಯ ತಿಗೆ ಕಳಿಸಿದರು. ಈ ಕಾರ್ಯದಲ್ಲಿ "ಇಂಪೀರಿಯಲ್ ಕೌನ್ಸಿಲ್ ಆಫ್ ಎಗ್ರಿ ಕಲ್ಚರಲ್ ರಿಸರ್ಚ್" ಎಂಬ ಹಿಂದೂ ದೇಶದ ಒಕ್ಕಲತನದ ಶೋಧಗಳ ಮಧ್ಯ ವರ್ತಿ ಮಂಡಲದವರು ೪೫೦೦ ರೂಪಾಯಿಗಳನ್ನು ಕೊಟ್ಟು ನೆರವಾದರು. ಈ ಪ್ರಯೋಗಗಳಿಂದ ವಿಲಾಯತಿಗೆ ಮಾವಿನ ಹಣ್ಣುಗಳನ್ನು ಕಳಿಸಿದರೆ ಒಳ್ಳೇ ಬೆಲೆ ಯು ಬರುತ್ತದೆಂತಲೂ ತಿಳಿದು ಬಂತು. ಈ ವರ್ಷ ಒಂದೊಂದು ಹಣ್ಣಿಗೆ ಒಂದು ರೂಪಾಯಿ ಬೆಲೆಯು ಬಂದಿರುತ್ತದೆ. ಹಣ್ಣುಗಳನ್ನು ಕಳಿಸುವ ವೆಚ್ಚವು ಅವುಗಳ ಬೆಲೆ ಸಹಿತ ಎಂಟು-ಹತ್ತು ಆಣೆಗಳಷ್ಟು ಪ್ರತಿ ಒಂದು ಹಣ್ಣಿಗೆ ಬರುತ್ತದೆ.

ಮಾವಿನ ಕಾಯಿಗಳನ್ನು ಒಂದೆರಡು ಇಂಚು ತೊಟ್ಟು ಬಿಟ್ಟು ನೋವಾಗ ದಂತೆ ಕಯ್ಯಿಂದಲೇ ಹರಿಯಬೇಕು. ಹರಿಯುವಾಗ ಕಾಯಿಗಳು ಸಂಪೂರ್ಣ ಒಲಿತಿರಬಾರದು. ಸುಮಾರು ಎಂಟು ದಿನಗಳ ಬೆಳವು ಇರುವಾಗಲೇ ಅವುಗಳನ್ನು ಹರಿಯಬೇಕು. ಮುಂದೆ ಅವುಗಳನ್ನು ಬಹಳ ಎಚ್ಚರದಿಂದ ನಂಬರವಾರಿಯಾಗಿ ಆರಿಸಿ ವರ್ಗಗಳನ್ನು ಮಾಡಿ, ಪ್ರತಿಯೊಂದು ಪೆಟ್ಟಿಗೆಯಲ್ಲಿ ಒಂದೇ ವರ್ಗದ ಕಾಯಿಗಳನ್ನು ಇಟ್ಟು ತುಂಬಬೇಕು. ಪೆಟ್ಟಿಗೆಯು ೧೮ ಇಂಚು ಉದ್ದ,

---

* "ಎ" ವ್ಹಿಟಾಮಿನದಿಂದ ಶರೀರದ ಬೆಳವಣಿಗೆಯು ಸರಿಯಾಗಿ ಆಗು ತ್ತದೆ. ಆರೋಗ್ಯ ವೃದ್ಧಿಯಾಗಿ ರೋಗಾದಿಗಳನ್ನು ಎದುರಿಸಿ ತಡಕೊಳ್ಳುವ ಶಕ್ತಿ ಯು ಉಂಟಾಗುತ್ತದೆ. "ಸಿ" ವ್ಹಿಟಾಮಿನದಿಂದ ರಕ್ತ ಶುದ್ಧಿಯಾಗುತ್ತದೆ. ದಾಢೆಗಳು ಬಾತು ಅವುಗಳಿಂದ ರಕ್ತ ಬರುವದು ನಿಲ್ಲುತ್ತದೆ.

೯ ಇಂಚು ಅಗಲ, ೩½ ಇಂಚು ಎತ್ತರ ಇರಬೇಕು. ಇದರ ನಡುವೆ ಉದ್ದನ್ನ ಒಂದು ಹಲಿಗೆಯನ್ನು ಹಾಕಿ ಎರಡು ವಿಭಾಗಗಳನ್ನು ಮಾಡಬೇಕು. ಒಂದೊಂದು ವಿಭಾಗದಲ್ಲಿ ಐದಾರು ಕಾಯಿಗಳನ್ನು ಒಂದಕ್ಕೊಂದು ಹತ್ತಿ ಇಡಬೇಕು. ಪೆಟ್ಟಿಗೆಯ ಕೆಳಗಿನ ಹಲಿಗೆಗಳೂ ಮೇಲಿನ ಹಲಿಗೆಗಳೂ ನಡುವೆ ಅಂತರ ಇಟ್ಟು ಮುಚ್ಚಲ್ಪಡುತ್ತವೆ. ಇದರಿಂದ ಒಳಗೆ ಚನ್ನಾಗಿ ಗಾಳಿಯಾಡುತ್ತದೆ. ಮಾವಿನ ಕಾಯಿಗಳನ್ನು ಇಡುವಾಗ ಅವುಗಳ ಕೆಳಗೂ ಮೇಲೂ ಸುತ್ತಲೂ ಎಣ್ಣೆ ಕಾಗದದ ಚೂರುಗಳನ್ನಾಗಲಿ, ವುಡ್ ವೂಲ್ ಎಂಬ ಕಟ್ಟಿಗೆಯ ಮಿದುವಾದ ಚೂರುಗಳನ್ನಾಗಲಿ ತುಂಬಬೇಕು. ತುಂಬದಿದ್ದರೆ ಪೆಟ್ಟಿಗೆಯನ್ನು ಎತ್ತುವಾಗ ಕಾಯಿಗಳು ಒಂದಕ್ಕೊಂದು ಬಡಿದಾಡಿ ಅವುಗಳಿಗೆ ನೋವಾಗಬಹುದು. ಪೆಟ್ಟಿಗೆಗಳನ್ನು ತುಂಬಿದ ಬಳಿಕ ಮೇಲಿನ ಹಲಿಗೆಗಳನ್ನು ಮೊಳೆಗಳಿಂದ ಮುಚ್ಚಿ ಮೇಲೆ ವಿಳಾಸವನ್ನು ಬರೆದು ಕಳಿಸಲಿಕ್ಕೆ ಸಿದ್ಧಪಡಿಸಬೇಕು. ಹೀಗೆ ಸಿದ್ಧವಾದ ಐದೈದು ಪೆಟ್ಟಿಗೆಗಳನ್ನು ಒಂದರಮೇಲೊಂದು ಇಟ್ಟು ಎಲ್ಲವನ್ನೂ ಕಬ್ಬಿಣದ ಸರಿಗೆಯಿಂದ ಬಿಗಿದು ಕಟ್ಟಿ ಒಂದು ಗಂಟು ಮಾಡಬೇಕು. ಈ ಗಂಟುಗಳನ್ನು ಉಗಿ ಹಡಗದ ಕಂಪನಿಯ ಎಜಂಟರ ಸ್ವಾಧೀನಪಡಿಸಿ, ಅವರು ಹಡಗದಲ್ಲಿ ಯೋಗ್ಯ ಸ್ಥಳದಲ್ಲಿ ಸರಿಯಾಗಿ ಇಡುವಂತೆ ನೋಡಿಕೊಳ್ಳಬೇಕು.

ಹೀಗೆ ಕಳಿಸಿದ ಕಾಯಿಗಳು ವಿಲಾಯತಿಗೆ ೧೮ ದಿನಗಳಲ್ಲಿ ಉತ್ತಮ ಸ್ಥಿತಿಯಲ್ಲಿ ಮುಟ್ಟುತ್ತವೆ. ಅಲ್ಲಿ ಪೆಟ್ಟಿಗೆಗಳನ್ನು ತೆರೆದು ಹಣ್ಣುಗಳನ್ನು ಮಾರಲಿಕ್ಕೆ ಇಡುತ್ತಾರೆ. ಈ ವಿಷಯದ ಪ್ರಯೋಗವು ಇನ್ನೂ ಒಂದೆರಡು ವರ್ಷಗಳು ನಡೆಯುವದು ಅವಶ್ಯವಿರುತ್ತದೆ. ಈಗಾಗಿರುವ ಪ್ರಯೋಗಗಳ ಲಾಭವನ್ನು ಪಡೆದು ಈಗಾಗಲೇ ಕೆಲವು ವ್ಯಾಪಾರಿಗಳು ಮುಂಬಯಿಯಿಂದ ಸಾವಿರಗಟ್ಲೆ ಪೆಟ್ಟಿಗೆಗಳನ್ನು ವಿಲಾಯಿತಿಗೆ ಕಳಿಸಿರುತ್ತಾರೆ.

**ಮಾವಿನ ತೋಟಗಳ ಆದಾಯ ವೆಚ್ಚ :—** ಮಾವಿನ ಗಿಡಗಳ ತೋಟವನ್ನು ಮಾಡುವಾಗ ಎರಡು ರೀತಿಗಳನ್ನು ಅನುಸರಿಸಬಹುದು. ಮೊದಲನೆಯದು ಕೊಡಿಕಟ್ಟಿ ಸಿದ್ಧವಾದ ಗಿಡಗಳನ್ನು ಕೊಂಡು ತಂದು ನೆಟ್ಟು ಬೆಳೆಸಿಕೊಳ್ಳುವದು. ಎರಡನೆಯದು ಸ್ಥಳದ ಮೇಲೆ ಯೋಗ್ಯ ಅಂತರದಲ್ಲಿ ಕುಣಿಗಳಲ್ಲಿ ಗೊರಟೆಗಳನ್ನು ನೆಟ್ಟು ಸಸಿಗಳು ದೊಡ್ಡವಾದ ಬಳಿಕ ಅವುಗಳ ಮೇಲೆ ಕೊಡಿಕಟ್ಟಿಕೊಳ್ಳುವದು. ಇವೆರಡು ರೀತಿಗಳಲ್ಲೂ ಗುಣಾವಗುಣಗಳು ಇದ್ದೇ ಇರುತ್ತವೆ. ಮೊದಲನೆಯದರಲ್ಲಿ ಗಿಡಗಳನ್ನು ಕೊಳ್ಳಲಿಕ್ಕೆ ಒಮ್ಮೆಲೇ ಬಹಳ ದುಡ್ಡು ಬೇಕಾಗುತ್ತದೆ. ಗಿಡಗಳು ನಾಲ್ಕೈದು ವರ್ಷಗಳಲ್ಲಿ ಫಲ ಬಿಡುತ್ತವೆ. ಎರಡನೆಯದರಲ್ಲಿ ಗಿಡಗಳನ್ನು ಸ್ವತಃ ಬೆಳೆಸಿ ಕೊಡಿ ಕಟ್ಟಿಕೊಳ್ಳುವದರಿಂದ ವೆಚ್ಚವು ತುಸು ಕಡಿಮೆ

ಯಾಗುತ್ತದೆ. ಆದರೆ ಸಸಿಗಳ ಆರೈಕೆ, ಕೊಡಿಕಟ್ಟುವ ಕೆಲಸ ಮುಂತಾದವುಗಳನ್ನು ನೋಡಿಕೊಳ್ಳಬೇಕು. ಈ ಗಿಡಗಳು ಫಲ ಬಿಡಲಿಕ್ಕೆ ಏಳೆಂಟು ವರ್ಷಗಳಾದರೂ ಬೇಕು ಆದದರಿಂದ ಕೆಲವರಿಗೆ ಮೊದಲನೆಯ ರೀತಿಯಲ್ಲಿ ದುಡ್ಡು ಹೆಚ್ಚು ಬಿದ್ದರೂ ಕೆಲಸವೂ ಶ್ರಮವೂ ಕಡಿಮೆಯಾಗಿ ಬೇಗನೆ ಹಣ್ಣುಗಳು ದೊರೆಯ ಬಹುದಾದ್ದರಿಂದ ಈ ರೀತಿಯೇ ಮೇಲು ಅನಿಸಬಹುದು. ಉಳಿದವರಿಗೆ ಕಯ್ಯಲ್ಲಿ ಒಮ್ಮೆಲೆ ದುಡ್ಡು ಸಿಗದ್ದರಿಂದ ಫಲ ಬರಲಿಕ್ಕೆ ತಡವಾದರೂ ಎರಡನೆಯ ರೀತಿಯೇ ಹೆಚ್ಚು ಅನುಕೂಲವೆನಿಸಬಹುದು. ಆದದರಿಂದ ಈ ಎರಡೂ ರೀತಿಗಳಲ್ಲಿ ತೋಟವನ್ನು ಮಾಡಿಕೊಳ್ಳಲಿಕ್ಕೆ ಬರಬಹುದಾದ ವೆಚ್ಚವನ್ನೂ ಅದರಿಂದ ಬರುವ ಆದಾಯುವನ್ನೂ ಇದರಡಿಯಲ್ಲಿ ಸಾಮಾನ್ಯವಾಗಿ ಕೊಟ್ಟಿದ್ದೇವೆ.

ಈ ಆದಾಯ ವೆಚ್ಚಗಳು ಕೊನೆಯ ಸಿದ್ಧಾಂತವೆಂದು ಯಾರೂ ತಿಳಿಯಲಾಗದು ದೇಶಕಾಲ ಪರಿಸ್ಥಿತಿಗಳನ್ನನುಸರಿಸಿ ಇವುಗಳಲ್ಲಿ ಹೆಚ್ಚು ಕಡಿಮೆ ಆಗೇ ಆಗುವದು ಮುಖ್ಯವಾಗಿ ಇವುಗಳಲ್ಲಿ ನೆಲ, ನೀರು, ಕೂಲಿ, ಹಣ್ಣುಗಳ ದರ ಮುಂತಾದ ವಿಷಯಗಳಲ್ಲಿ ಇಂತಿಷ್ಟು ವೆಚ್ಚವೂ ಆದಾಯವೂ ಬರುವವೆಂದು ಹೇಳುವದು ಸಾಧ್ಯವಲ್ಲ. ಇವುಗಳ ಲೆಖ್ಖವನ್ನು ಕೆಲವು ನಿಶ್ಚಿತ ಪರಿಸ್ಥಿತಿಗಳಲ್ಲಿ ಎರುವಂತೆ ಹಿಡಿದಿರುತ್ತದೆ.

## (೧) ಮೊದಲನೆಯ ರೀತಿ :—

ಪ್ರತಿ ಒಂದು ಎಕರೆಗೆ ಬರುವ ಆದಾಯ ವೆಚ್ಚ.

### ೧ ನೆಯ ವರ್ಷ

| ಆದಾಯ. | ರೂ.ಆ.ಪೈ. |
|---|---|
| ಪಲ್ಲೆಕಾಯಿ, ನೆಲಗಡ್ಲೆ ಮುಂತಾದ ಯಾವದಾದರೊಂದು ಉಪ ಬೆಳೆಯನ್ನು ಬೆಳೆಸಿಕೊಂಡದ್ದರಿಂದ ಬರುವ ನಿಕ್ಕಿ ಲಾಭ | ೧೦೦-೦-೦ |
| ಒಟ್ಟು ರೂ. | ೧೦೦—೦-೦ |
| ನಿಕ್ಕಿ ವೆಚ್ಚ | ೪೧೫-೧೦-೦ |

ವೆಚ್ಚ :

| | |
|---|---|
| ನೆಲವನ್ನು ಕೊಳ್ಳುವದಕ್ಕೆ ... | ೩೦೦-೦-೦ |
| ಗಿಡಗಂಟಿಗಳನ್ನು ತೆಗೆದು ಸ್ವಚ್ಛಮಾಡುವದು ಮುಂತಾದ್ದಕ್ಕೆ ... | ೧೫-೦-೦ |
| ಸುತ್ತಲು ಬೇಲಿ ಮಾಡುವದಕ್ಕೆ ... | ೨೫-೦-೦ |
| ಕುಣಿಗಳನ್ನು ತೆಗೆಸಲಿಕ್ಕೆ—ಮೂವತ್ತು ಫೂಟುಗಳ ಅಂತರದಲ್ಲಿ ೪೮ ಕುಣಿಗಳನ್ನು ಅಗೆಸಲಿಕ್ಕೆ, ಪ್ರತಿಯೊಂದು ಕುಣಿಯು ೩ × ೩ × ೩ ಫೂಟುಗಳ ಆಕಾರದ್ದು, ೪ ಆಣೆ ಗೊಂದರಂತೆ | ೧೨-೦-೦ |

| | | |
|---|---|---|
| | | ರೂ.ಆ.ಪೈ. |
| ಕುಣಿಗಳಲ್ಲಿ ಗಿಡಗಂಟಿಗಳನ್ನು ಹಾಕಿ ಸುಡುವದಕ್ಕೆ ಕೂಲಿ | ... | ೧-೮-೦ |
| ಕೊಡಿಕಟ್ಟಿದ ಗಿಡಗಳನ್ನು ಕೊಳ್ಳುವದಕ್ಕೆ ಗಿಡವೊಂದಕ್ಕೆ ರೂ. ೧-೮-೦ ಪ್ರಕಾರ | ... | ೭೨-೦-೦ |
| ಗಿಡಗಳನ್ನು ನೆಡುವಾಗ ಹಾಕುವ ಗೊಬ್ಬರ :— | | |
| ಸಗಣೀ ಗೊಬ್ಬರ ೪ ಗಾಡಿಗಳು ರೂ. ೧-೮-೦ ಪ್ರಕಾರ | | ೬-೦-೦ |
| ಎಲುಬಿನ ಹುಡಿ ೨೪೦ ರತ್ತಲು ೧ ರೂ.ಗೆ ೨೪ ರತ್ತಲ ಪ್ರ. | | ೧೦-೦-೦ |
| ಗಿಡಗಳನ್ನು ನೆಡುವದಕ್ಕೆ ಕೂಲಿ | ... | ೨-೦-೦ |
| ನೀರು ಹಾಯಿಸುವ ವೆಚ್ಚ :— | | |
| ವರ್ಷದಲ್ಲಿ ೮ ತಿಂಗಳು ೮ ದಿನಗಳಿಗೊಮ್ಮೆ, ಬಾರಿಗೆ ರೂ. ೧ ರಂತೆ | ... | ೩೨-೦-೦ |
| ಕಳೆ ತೆಗೆಯುವದು, ಮಣ್ಣು ಕೆದರುವದು ಮುಂ. | ... | ೧೦-೦-೦ |
| ಸರಕಾರ ತೆರಿಗೆ | ... | ೨-೦-೦ |
| ವರ್ಷದ ಆರಂಭದಲ್ಲಿ ವೆಚ್ಚಮಾಡಿದ ರೂ. ೪೫೦-೦-೦ ಕ್ಕೆ ಬಡ್ಡಿ ೧೦೦ ಕ್ಕೆ ವರ್ಷಕ್ಕೆ ರೂ. ೬-೪-೦ ರಂತೆ | ... | ೨೮-೨-೦ |
| | ಒಟ್ಟು ರಾಸು | ೫೧೫-೧೦-೦ |

## ೨ ನೆಯ ವರ್ಷ

### ಆದಾಯ :

| | | |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೧೦೦-೦-೦ |
| | ಒಟ್ಟು ರೂ. | ೧೦೦-೦-೦ |

### ವೆಚ್ಚ :

| | | |
|---|---|---|
| ಗೊಬ್ಬರ—ಸಗಣೀ ಗೊಬ್ಬರ ೧ ಗಾಡಿ | ... | ೧-೮-೦ |
| ಎಲುಬಿನ ಹುಡಿ ೪೮ ರತ್ತಲು | ... | ೨-೦-೦ |
| ನೀರು ಹಾಯಿಸುವ ವೆಚ್ಚ, ಮೊದಲನೆಯ ವರ್ಷದಂತೆ | ... | ೩೨-೦-೦ |
| ಕಳೆ ತೆಗೆಯುವದು, ಮಣ್ಣು ಕೆದರುವದು ಮುಂ. | ... | ೧೦-೦-೦ |
| ಸರಕಾರ ತೆರಿಗೆ | ... | ೨-೦-೦ |
| ಮೊದಲನೆಯ ವರ್ಷದ ನಿಕ್ಕಿ ವೆಚ್ಚದ ಮೇಲೆ ಬಡ್ಡಿ, ರೂ. ೪೧೫-೧೦-೦ ಕ್ಕೆ ರೂ. ೬-೪-೦ ಯಂತೆ | ... | ೨೬-೦-೦ |
| | ಒಟ್ಟು ರಾಸು | ೭೩-೮-೦ |
| | ನಿಕ್ಕಿ ಲಾಭ | ೨೬-೮-೦ |

## ೩ ನೆಯ ವರ್ಷ

| ಆದಾಯ : | | ರೂ.ಆ.ಪೈ. |
|---|---|---|
| ಉಪಬೆಳೆಯಿಂದ ನಿಕ್ಕಿ ಲಾಭ | ... | ೮೦-೦-೦ |
| (ಮಾವಿನ ಗಿಡಗಳು ದೊಡ್ಡವಾಗಿ ಪಸರಿಸಿದಂತೆ, ಉಪಬೆಳೆಗಳಿಗೆ ದೊರೆಯುವ ಸ್ಥಳವು ಆಕುಂಚಿತವಾಗುತ್ತ ಹೋಗುವದು. ಅದರಿಂದ ಉಪಬೆಳೆಗಳಿಂದ ಬರುವ ಉತ್ಪನ್ನವು ಕಡಿಮೆಯಾಗುತ್ತದೆ.) | | |
| | ಒಟ್ಟು ರೂ. | ೮೦-೦-೦ |

| ವೆಚ್ಚ : | | |
|---|---|---|
| ಗೊಬ್ಬರ:—ಸಗಣೀ ಗೊಬ್ಬರ ೧॥ ಗಾಡಿ | ... | ೨-೪-೦ |
| ಎಲುಬಿನ ಹುಡಿ ೯೬ ರತ್ತಲು | ... | ೪-೦-೦ |
| ನೀರು ಹಾಯಿಸುವ ವೆಚ್ಚ | ... | ೩೨-೦-೦ |
| ಕಳೆ ತೆಗೆಯುವದು, ಮಣ್ಣು ಕೆದರುವದು ಮುಂ. | ... | ೧೦-೦-೦ |
| ಸರಕಾರದ ತೆರಿಗೆ | ... | ೨-೦-೦ |
| ಎರಡನೆಯ ವರ್ಷದ ತುದಿಗಾದ ನಿಕ್ಕಿ ವೆಚ್ಚದ ಮೇಲೆ ಬಡ್ಡಿ ರೂ. ೩೮೯-೨-೦ ಕ್ಕೆ ೬-೪-೦ ಪ್ರಕಾರ | ... | ೨೪-೫-೦ |
| | ಒಟ್ಟು ರಾಸು | ೭೪-೯-೦ |
| | ನಿಕ್ಕಿ ಲಾಭ | ೫-೭-೦ |

## ೪ ನೆಯ ವರ್ಷ

| ಆದಾಯ : | | |
|---|---|---|
| ಉಪಬೆಳೆಯಿಂದ ನಿಕ್ಕಿ ಲಾಭ | ... | ೬೦-೦-೦ |
| | ಒಟ್ಟು ರೂ. | ೬೦-೦-೦ |
| | ನಿಕ್ಕಿ ವೆಚ್ಚ | ೧೭-೦-೦ |

| ವೆಚ್ಚ : | | |
|---|---|---|
| ಗೊಬ್ಬರ :—ಸಗಣೀ ಗೊಬ್ಬರ ೨ ಗಾಡಿಗಳು | ... | ೩-೦-೦ |
| ಎಲುಬಿನ ಹುಡಿ ೧೪೪ ರತ್ತಲು | ... | ೬-೦-೦ |
| ನೀರು ಹಾಯಿಸುವ ವೆಚ್ಚ | ... | ೩೨-೦-೦ |
| ಕಳೆ ತೆಗೆಯುವದು ಮುಂ. | ... | ೧೦-೦-೦ |

| | | ರೂ.ಆ.ಪೈ. |
|---|---|---|
| ಸರಕಾರದ ತೆರಿಗೆ | ... | ೨-೦-೦ |
| ಮೂರನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೩೮೩-೧೧-೦ ಕ್ಕೆ ೬-೪-೦ ಪ್ರಕಾರ | ... | ೨೪-೦-೦ |
| | ಒಟ್ಟು ರಾಸು | ೭೭-೦-೦ |

## ೫ ನೆಯ ವರ್ಷ

ಆದಾಯ :

| | | |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೪೦-೦-೦ |
| ಗಿಡಗಳು ಫಲಕ್ಕೆಬಂದದ್ದರಿಂದ ದೊರೆತ ಫಲಗಳ ಬೆಲೆ—ಗಿಡಕ್ಕೆ ೧೦ ಕಾಯಿಗಳಂತೆ ಎಕರೆಗೆ ಬರುವ ೪೮೦ ಕಾಯಿಗಳಿಗೆ ರೂ. ೦-೮-೦ ಗೆ ಡಜನ್ನಿನಂತೆ | ... | ೨೦-೦-೦ |
| | ಒಟ್ಟು ರೂ. | ೬೦-೦-೦ |
| | ನಿಕ್ಕಿ ವೆಚ್ಚ | ೨೨-೧೩-೦ |

ವೆಚ್ಚ :

| | | |
|---|---|---|
| ಗೊಬ್ಬರ :—ಸಗಣೀ ಗೊಬ್ಬರ ೨॥ ಗಾಡಿಗಳು | ... | ೩-೧೨-೦ |
| ಎಲುಬಿನ ಹುಡಿ ೧೯೨ ರತ್ತಲು | ... | ೮-೦-೦ |
| ನೀರು ಹಾಯಿಸುವ ವೆಚ್ಚ | ... | ೩೨-೦-೦ |
| ಕಳೆ ತೆಗೆಯುವದು ಮುಂ. | ... | ೧೨-೦-೦ |
| ಸರಕಾರದ ತೆರಿಗೆ | ... | ೨-೦-೦ |
| ನಾಲ್ಕನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೪೦೦-೧೧-೦ ಕ್ಕೆ ೬-೪-೦ ಪ್ರಕಾರ | ... | ೨೫-೧-೦ |
| | ಒಟ್ಟು ರಾಸು | ೮೨-೧೩-೦ |

## ೬ ನೆಯ ವರ್ಷ

ಆದಾಯ :

| | | |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೨೦-೦-೦ |
| ಮಾವಿನ ಕಾಯಿಗಳ ಬೆಲೆ—ಗಿಡಕ್ಕೆ ೨೦ ಕಾಯಿಗಳಂತೆ ಒಂದು ಎಕರೆಗೆ ಬರುವ ೯೬೦ ಕಾಯಿಗಳಿಗೆ ರೂ. ೦-೮-೦ ಗೆ ಡಜನ್ನಿನಂತೆ | ... | ೪೦-೦-೦ |
| | ಒಟ್ಟು ರೂ. | ೬೦-೦-೦ |

| ವೆಚ್ಚ : | | ರೂ.ಆ.ಪೈ. |
| --- | --- | --- |
| ಗೊಬ್ಬರ:—ಸಗಣೀ ಗೊಬ್ಬರ ೩ ಗಾಡಿಗಳು | ... | ೪–೮–೦ |
| ಎಲುಬಿನ ಹುಡಿ ೨೪೦ ರತ್ತಲು | ... | ೧೦–೦–೦ |
| (ಆರನೆಯ ವರ್ಷದಿಂದ ಮಾವಿನ ಗಿಡಗಳಿಗೆ ನೀರು ಹಾಯಿಸುವದಿಲ್ಲ) | | |
| ನೆಲವನ್ನು ಕಡಿಯುವದು ಅಥವಾ ಹೂಡುವದು ಮುಂ. | ... | ೧೨–೦–೦ |
| ಸರಕಾರದ ತೆರಿಗೆ | ... | ೨–೦–೦ |
| ಐದನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೪೨೩–೮–೦ ಕ್ಕೆ ೬–೪–೦ ಪ್ರಕಾರ | ... | ೨೬–೮–೦ |
| | ಒಟ್ಟು ರಾಸು | ೫೫–೦–೦ |
| | ನಿಕ್ಕಿ ಲಾಭ | ೫–೦–೦ |

## ೭ ನೆಯ ವರ್ಷ

ಆದಾಯ:

| | | |
| --- | --- | --- |
| (ಏಳನೆಯ ವರ್ಷ ಉಪಬೆಳೆಗಳನ್ನು ಬೆಳೆಸಬಾರದು.) | | |
| ಮಾವಿನ ಕಾಯಿಗಳ ಬೆಲೆ—ಗಿಡಕ್ಕೆ ೫ ಕಾಯಿಗಳಂತೆ ಒಂದು ಎಕರೆಗೆ ಬರುವ ೨೪೦ ಕಾಯಿಗಳಿಗೆ ರೂ. ೦–೮–೦ ಗೆ ಡಜನ್ನಿನಂತೆ | ... | ೧೦–೦–೦ |
| | ಒಟ್ಟು ರೂ. | ೧೦–೦–೦ |
| | ನಿಕ್ಕಿ ವೆಚ್ಚ | ೪೭–೬–೬ |

ವೆಚ್ಚ :

| | | |
| --- | --- | --- |
| ಗೊಬ್ಬರ:—ಸಗಣೀ ಗೊಬ್ಬರ ೩॥ ಗಾಡಿಗಳು | ... | ೫–೪–೦ |
| ಎಲುಬಿನ ಹುಡಿ ೨೮೮ ರತ್ತಲು | ... | ೧೨–೦–೦ |
| ನೆಲವನ್ನು ಕಡಿಯುವದು ಮುಂ. | ... | ೧೨–೦–೦ |
| ಸರಕಾರದ ತೆರಿಗೆ | ... | ೨–೦–೦ |
| ಆರನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೪೧೮–೮–೦ ಕ್ಕೆ ೬–೪–೦ ಪ್ರಕಾರ | ... | ೨೬–೨–೬ |
| | ಒಟ್ಟು ರಾಸು | ೫೭–೬–೬ |

## ೮ ನೆಯ ವರ್ಷ

| ಆದಾಯ : | | ರೂ.ಆ.ಪೈ. |
|---|---|---|
| ಮಾವಿನ ಕಾಯಿಗಳ ಬೆಲೆ—ಗಿಡಕ್ಕೆ ೨೦ ಕಾಯಿಗಳಂತೆ ಒಂದು ಎಕರೆಗೆ ಬರುವ ೯೬೦ ಕಾಯಿಗಳಿಗೆ ರೂ. ೦–೮–೦ ಗೆ ಡಜನ್ನಿನಂತೆ | ... | ೪೦–೦–೦ |
| | ಒಟ್ಟು ರೂ. | ೪೦–೦–೦ |
| | ನಿಕ್ಕಿ ವೆಚ್ಚ | ೨೩–೨–೦ |

| ವೆಚ್ಚ : | | |
|---|---|---|
| ಗೊಬ್ಬರ :—ಸೆಗಣೀ ಗೊಬ್ಬರ ೪ ಗಾಡಿಗಳು | ... | ೬–೦–೦ |
| ಎಲುಬಿನ ಹುಡಿ ೩೩೬ ರತ್ತಲು | ... | ೧೪–೦–೦ |
| ನೆಲವನ್ನು ಕಡಿಯುವದು ಮುಂ. | ... | ೧೨–೦–೦ |
| ಸರಕಾರದ ತೆರಿಗೆ | ... | ೨–೦–೦ |
| ಏಳನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೪೬೫–೧೪–೬ ಕ್ಕೆ ೬–೪–೦ ಪ್ರಕಾರ | ... | ೨೯–೨–೦ |
| | ಒಟ್ಟು ರಾಸು | ೬೩–೨–೦ |

## ೯ ನೆಯ ವರ್ಷ

| ಆದಾಯ : | | |
|---|---|---|
| ಮಾವಿನ ಕಾಯಿಗಳ ಬೆಲೆ—ಗಿಡಕ್ಕೆ ೨೫ ಕಾಯಿಗಳಂತೆ ಒಂದು ಎಕರೆಗೆ ಬರುವ ೧೨೦೦ ಕಾಯಿಗಳಿಗೆ, ರೂ. ೦–೮–೦ ಗೆ ಡಜನ್ನಿನಂತೆ | ... | ೫೦–೦–೦ |
| | ಒಟ್ಟು ರೂ. | ೫೦–೦–೦ |
| | ನಿಕ್ಕಿ ವೆಚ್ಚ | ೧೭–೫–೦ |

ವೆಚ್ಚ:

| | | |
|---|---|---|
| ಗೊಬ್ಬರ:—ಸಗಣೀ ಗೊಬ್ಬರ ೪॥ ಗಾಡಿಗಳು | ... | ೬-೧೨-೦ |
| ಎಲುಬಿನ ಹುಡಿ ೩೮೪ ರತ್ತಲು | .. | ೧೬-೦-೦ |
| ನೆಲವನ್ನು ಕಡಿಯುವದು ಮುಂ. | ... | ೧೨-೦-೦ |
| ಸರಕಾರದ ತೆರಿಗೆ | ... | ೨-೦-೦ |
| ಎಂಟನೆಯ ವರ್ಷದ ತುದಿಗಾದ ವೆಚ್ಚದ ಮೇಲೆ ಬಡ್ಡಿ ರೂ. ೪೮೯-೦-೬ ಕ್ಕೆ ೬-೪-೦ ಪ್ರಕಾರ | ... | ೩೦-೯-೦ |
| | ಒಟ್ಟು ರಾಸು | ೬೭-೫-೦ |

೯ ನೆಯ ವರ್ಷವಾದ ಬಳಿಕ ಗಿಡಗಳ ಆರೈಕೆಯ ಮೇಲೆ ಆಗುವ ವೆಚ್ಚವು ಪ್ರತಿವರ್ಷ ಅಷ್ಟೇ ಉಳಿಯುತ್ತದೆನ್ನಬಹುದು. ಉತ್ಪನ್ನವು ಮಾತ್ರ ಬೆಳೆಯುತ್ತ ಹೋಗುತ್ತದೆ. ಕೆಲವು ಗಿಡಗಳ ಸರಾಸರಿ ಉತ್ಪನ್ನವು ಈ ಕೆಳಗೆ ಕೊಟ್ಟ ಕೋಷ್ಟಕದಲ್ಲಿ ತೋರಿಸಿದಂತೆ ಇತ್ತು. ಅದರೊಡನೆ ಹೋಲಿಸಿ ನೋಡುವಕ್ಕಾಗಿ ಪ್ರತಿವರ್ಷದ ವೆಚ್ಚವನ್ನೂ ನಿಕ್ಕಿ ಲಾಭವನ್ನೂ ಕೊಟ್ಟಿದ್ದೇವೆ. ವೆಚ್ಚದಲ್ಲಿ ಬಡ್ಡಿಯು ಹೆಚ್ಚು ಕಡಿಮೆ ಆಗುತ್ತದೆಂಬದನ್ನು ಮರೆಯಬಾರದು.

(ಮುಂದಿನ ಪಾನು ನೋಡು.)

ಈ ಕೋಷ್ಟಕದಿಂದ ಮಾವಿನ ಗಿಡಗಳನ್ನು ನೆಟ್ಟಂದಿನಿಂದ ೧೮ ವರ್ಷಗಳಲ್ಲಿ ಮೂಲ ಭಾಂಡವಲೆಲ್ಲ ತಿರುಗಿ ಬಂದು ತೋಟವು ನಿಜವಾದ ಲಾಭವನ್ನು ಕೊಡುವ ಆಸ್ತಿಯಾಗುವದು ಎಂಬದು ಸ್ಪಷ್ಟವಾಗುತ್ತದೆ. ಗಿಡಗಳು ಐದನೆಯ ವರ್ಷದಲ್ಲಿ ಫಲಕ್ಕೆ ಬಂದರೂ, ಮುಂದೆ ಸುಮಾರು ಹತ್ತು ವರ್ಷಗಳ ವರೆಗೆ ಅವುಗಳಿಂದ ಬಂದ ಉತ್ಪನ್ನವು ತೋಟದ ವೆಚ್ಚಕ್ಕೂ ಮೂಲ ಭಾಂಡವಲಿನ ಬಡ್ಡಿಗೂ ಸರಿಯಾಗುತ್ತದೆ. ಹದಿಮೂರು ಹದಿನಾಲ್ಕನೆಯ ವರ್ಷದಿಂದ ಮೂಲ ಭಾಂಡವಲು ತಿರುಗಿ ಎರಲಾರಂಭಿಸಿ ಹದಿನೆಂಟನೆಯ ವರ್ಷ ತೋಟವು ನಮ್ಮದಾಗಿ ಲಾಭವಾಗಲಾರಂಭಿಸುತ್ತದೆ.

ಈ ಲೆಕ್ಕದಲ್ಲಿ ಕೆಳಗಿನ ನಿಶ್ಚಿತ ಪರಿಸ್ಥಿತಿಗಳನ್ನು ಗಣಿಸಿರುವದರಿಂದ ಇವುಗಳಲ್ಲಿ ಯಾವ ಸಂಗತಿಯಲ್ಲಾದರೂ ವ್ಯತ್ಯಾಸವಾದರೆ ಇಡೀ ಲೆಕ್ಕದಲ್ಲೇ ಹೆಚ್ಚು ಕಡಿಮೆಯಾಗುವದು. ಈ ನಿಶ್ಚಿತ ಪರಿಸ್ಥಿತಿಗಳು ಯಾವವೆಂದರೆ :—

(೧) ನೆಲದ ಬೆಲೆಯನ್ನು ೩೦೦ ರೂಪಾಯಿಗಳೆಂದು ಹಿಡಿದಿರುತ್ತದೆ.

| ಗಿಡಗಳ ವಯಸ್ಸು. ವರ್ಷ | ಒಂದು ಗಿಡಕ್ಕೆ ಬರುವ ಕಾಯಿಗಳು | ಒಂದು ಎಕರೆಗೆ ಬರುವ ಕಾಯಿಗಳು | ಒಂದು ಎಕರೆಯ ಉತ್ಪನ್ನ. ಡಜನ್ನಿಗೆ ರೂ. ೦-೮-೦ ಯಂತೆ | ಒಂದು ಎಕರೆಯ ವೆಚ್ಚ | ಎಕರೆ ಯೊಂದಕ್ಕೆ ನಿಕ್ಕಿ ಲಾಭ + ಅಥವಾ ಹಾನಿ − | ಒಟ್ಟು ವೆಚ್ಚಮಾಡಿದ ಭಾಂಡವಲು ತಿರುಗಿ ಬರತಕ್ಕದ್ದು. |
|---|---|---|---|---|---|---|
| | | | ರೂ. ಆ. ಪೈ. | ರೂ. ಆ. ಪೈ. | ರೂ. ಆ. ಪೈ. | ರೂ. ಆ. ಪೈ. |
| ೧೦ | ೧೨ | ೫೭೬ | ೨೪-೦-೦ | ೬೮—೬-೩ | − ೪೪-೬-೩ | ೫೫೦-೧೧-೯ |
| ೧೧ | ೪೦ | ೧೯೨೦ | ೮೦-೦-೦ | ೭೩—೨-೯ | + ೬-೧೩-೩ | ೫೪೩-೧೪-೬ |
| ೧೨ | ೬೪ | ೩೦೭೨ | ೧೨೮-೦-೦ | ೭೦-೧೨-೦ | + ೫೭-೪-೦ | ೪೮೬-೧೦-೬ |
| ೧೩ | ೩೦ | ೧೪೪೦ | ೬೦-೦-೦ | ೬೭—೨-೯ | − ೭-೨-೯ | ೪೯೩-೧೩—೩ |
| ೧೪ | ೮೩ | ೩೯೮೪ | ೧೬೬-೦-೦ | ೬೭-೧೦-೦ | + ೯೮-೬-೦ | ೩೯೫—೭-೩ |
| ೧೫ | ೧೦೦ | ೪೮೦೦ | ೨೦೦-೦-೦ | ೬೧-೭-೬ | + ೧೩೮—೮-೬ | ೨೫೬-೧೪-೯ |
| ೧೬ | ೬೨ | ೨೯೭೬ | ೧೨೪-೦-೦ | ೫೨-೧೩-೦ | + ೭೧—೩-೦ | ೧೮೫-೧೧-೯ |
| ೧೭ | ೮೭ | ೪೧೭೬ | ೧೭೪-೦-೦ | ೪೮—೫-೯ | + ೧೨೫-೧೦-೩ | ೬೦—೧-೬ |
| ೧೮ | ೧೦೮ | ೫೧೮೪ | ೨೧೬-೦-೦ | ೪೦—೮-೦ | + ೧೭೫—೮-೦ | ಈ ವರ್ಷ ಭಾಂಡವಲಿನಲ್ಲಿ ಉಳಿದಿದ್ದ ರೂ. ೬೦-೧-೬ ವಜಾ ತೆಗೆದು ಉಳಿದ ಲಾಭ ರೂ. ೧೧೫-೬-೬. |
| ೧೯ | ೫೫ | ೨೬೪೦ | ೧೧೦-೦-೦ | ೨೫-೧೨-೬ | + ೮೪—೩-೬ | |

(೨) ಕೊಡಿಕಟ್ಟಿದ ಮಾವಿನ ಗಿಡಗಳನ್ನು ರೂ. ೧-೮-೦ ಗೆ ಒಂದರಂತೆ ಕೊಂಡು ತಂದಿರುತ್ತೇವೆ.

(೩) ಎಲುಬಿನ ಹುಡಿ ಗೊಬ್ಬರವು ಕಂಪನಿಯಿಂದ ರೂ. ೮೫-೦-೦ ಕ್ಕೆ ಟನ್ನಿನಂತೆ ತರಲ್ಪಟ್ಟಿದೆ.

(೪) ವಲ್ಲಿ ಕಾಯಿಗಳನ್ನು ಬೆಳೆಸಿದ್ದರಿಂದ ದೊಡ್ಡ ಬಾಜಾರಗಳ ಸಮೀಪದ ಊರುಗಳಲ್ಲಿ ಮಾತ್ರವೇ ಹೆಚ್ಚಿನ ಲಾಭವಾಗುತ್ತದೆ.

(೫) ಮೂಲ ಭಾಂಡವಲಿನ ಮೇಲೆ ನೂರಕ್ಕೆ ವರ್ಷಕ್ಕೆ ರೂ. ೬-೪-೦ ರಂತೆ ಬಡ್ಡಿ ದರವನ್ನು ಹಿಡಿದಿರುತ್ತದೆ. ಪ್ರತಿವರ್ಷದ ಬಡ್ಡಿಯನ್ನು ಮೂಲ ಭಾಂಡವಲಿಗೆ ಕೂಡಿಸಿದ್ದರಿಂದ ಬಡ್ಡಿಯ ದರವು ಚಕ್ರಬಡ್ಡಿಯಂತೆ ಆಗಿರುತ್ತದೆ.

(೬) ಮಾವಿನ ಕಾಯಿಗಳನ್ನೆಲ್ಲ ತೋಟದಲ್ಲೇ ರೂ. ೦-೮-೦ ಗೆ ಡಜನ್ನಿನಂತೆ ಮಾರಿರುತ್ತದೆ. ಇವೇ ಮುಂತಾದವು.

## (೨) ಎರಡನೆಯ ರೀತಿ :—

ಪ್ರತಿ ಒಂದು ಎಕರೆಗೆ ಬರುವ ಆದಾಯ ವೆಚ್ಚ.

### ೧ ನೆಯ ವರ್ಷ

| ಆದಾಯ. | ರೂ.ಆ.ಪೈ. |
|---|---|
| ವಲ್ಲಿ ಕಾಯಿ, ನೆಲಗಡ್ಲೆ ಮುಂತಾದ ಯಾವದಾದರೊಂದು ಉಪಬೆಳೆಯನ್ನು ಬೆಳೆಸಿಕೊಂಡದ್ದರಿಂದ ಬರುವ ನಿಕ್ಕಿ ಲಾಭ ... | ೧೦೦-೦-೦ |
| ಒಟ್ಟು ರೂ. | ೧೦೦-೦-೦ |
| ನಿಕ್ಕಿ ವೆಚ್ಚ | ೩೨೩-೬-೦ |

ವೆಚ್ಚ :

| | |
|---|---|
| ನೆಲವನ್ನು ಕೊಳ್ಳುವದಕ್ಕೆ ... | ೩೦೦-೦-೦ |
| ಗಿಡಗಂಟಿಗಳನ್ನು ತೆಗೆದು ಸ್ವಚ್ಛಮಾಡುವದು ಮುಂತಾದ್ದಕ್ಕೆ ... | ೧೫-೦-೦ |
| ಸುತ್ತಲು ಬೇಲಿ ಮಾಡುವದಕ್ಕೆ ... | ೨೫-೦-೦ |
| ಕುಣಿಗಳನ್ನು ತೆಗೆಸಲಿಕ್ಕೆ ... | ೧೨-೦-೦ |
| ಕುಣಿಗಳಲ್ಲಿ ಗಿಡಗಂಟೆಗಳನ್ನು ಹಾಕಿ ಸುಡಲಿಕ್ಕೆ ... | ೧-೮-೦ |
| ಮಾವಿನ ಗೊರಟೆಗಳನ್ನು ದೊರಕಿಸಿ ಒಂದೊಂದು ಕುಣಿಯಲ್ಲಿ ನಾಲ್ಕರಂತೆ ನೆಡಲಿಕ್ಕೆ | ೨-೦-೦ |

| | | ರೂ. ಆ. ಪೈ. |
|---|---|---|
| ಗಿಡಗಳನ್ನು ನೆಡುವದಕ್ಕೆ ಕೂಲಿ * | ... | ೨-೦-೦ |
| ನೀರು ಹಾಯಿಸುವ ವೆಚ್ಚ | ... | ೩೨-೦-೦ |
| ಕಳೆ ತೆಗೆಯುವದು, ಮಣ್ಣು ಕೆದರುವದು ಮುಂ. | ... | ೧೦-೦-೦ |
| ಸರಕಾರದ ತೆರಿಗೆ | .. | ೨-೦-೦ |
| ವರ್ಷದ ಆರಂಭದಲ್ಲಿ ವೆಚ್ಚಮಾಡಿದ ರೂ. ೩೫೦-೦-೦ ಕ್ಕೆ ಬಡ್ಡಿ ೧೦೦ ಕ್ಕೆ ವರ್ಷಕ್ಕೆ ರೂ. ೬-೪-೦ ರಂತೆ | ... | ೨೧-೧೪-೦ |
| | ಒಟ್ಟು ರಾಸು | ೪೨೩-೬-೦ |

## ೨ ನೆಯ ವರ್ಷ

ಆದಾಯ :

| | | |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೧೦೦-೦-೦ |
| | ಒಟ್ಟು ರೂ. | ೧೦೦-೦-೦ |

ವೆಚ್ಚ :

| | | |
|---|---|---|
| ಗೊಬ್ಬರ—ಸಗಣೀ ಗೊಬ್ಬರ ೧ ಗಾಡಿ | ... | ೧-೮-೦ |
| ಎಲುಬಿನ ಹುಡಿ ೪೮ ರತ್ತಲು | ... | ೨-೦-೦ |
| ನೀರು ಹಾಯಿಸುವ ವೆಚ್ಚ, ಮೊದಲನೆಯ ವರ್ಷದಂತೆ | ... | ೩೨-೦-೦ |
| ಕಳೆ ತೆಗೆಯುವದು, ಮಣ್ಣು ಕೆದರುವದು ಮುಂ. | ... | ೧೦-೦-೦ |
| ಸರಕಾರ ತೆರಿಗೆ | ... | ೨-೦-೦ |
| ಮೊದಲನೆಯ ವರ್ಷದ ನಿಕ್ಕಿ ವೆಚ್ಚದ ಮೇಲೆ ಬಡ್ಡಿ, ರೂ. ೩೨೩-೬-೦ ಕ್ಕೆ ರೂ. ೬-೪-೦ ಪ್ರಕಾರ | ... | ೨೦-೩-೬ |
| | ಒಟ್ಟು ರಾಸು | ೬೭-೧೧-೬ |
| | ನಿಕ್ಕಿ ಲಾಭ | ೩೨-೪-೬ |

* ಮೊದಲನೆಯ ವರ್ಷ ಗೊರಟೆಗಳನ್ನು ನೆಡುವಾಗ ಕುಣಿಗಳಲ್ಲಿ ಗೊಬ್ಬರವನ್ನು ಹಾಕುವ ಅವಶ್ಯವಿಲ್ಲ. ಗಿಡಗಳು ಹುಟ್ಟಿ ಬೆಳೆಯಬಾರಂಭಿಸುವ ವರೆಗೆ ಸಾಕಾಗುವಷ್ಟು ಅನ್ನವು ಗೊರಟೆಯಲ್ಲೂ ಮಣ್ಣಿನಲ್ಲೂ ಇರುತ್ತದೆ ಎರಡನೆಯ ವರ್ಷದಿಂದ ಗೊಬ್ಬರ ಹಾಕಬೇಕು.

## ೩ ನೆಯ ವರ್ಷ

| ಆದಾಯ : | | ರೂ.ಆ.ಪೈ. |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೮೦–೦–೦ |
| | ಒಟ್ಟು ರೂ. | ೮೦–೦–೦ |
| **ವೆಚ್ಚ :** | | |
| ಗೊಬ್ಬರ :—ಸಗಣೀ ಗೊಬ್ಬರ ೧॥ ಗಾಡಿ | ... | ೨–೪–೦ |
| ಎಲುಬಿನ ಹುಡಿ ೯೬ ರತ್ತಲು | ... | ೪–೦–೦ |
| ನೀರು ಹಾಯಿಸುವ ವೆಚ್ಚ | ... | ೩೨–೦–೦ |
| ಕಳೆ ತೆಗೆಯುವದು ಮುಂ. | ... | ೧೦–೦–೦ |
| ಸರಕಾರದ ತೆರಿಗೆ | ... | ೨–೦–೦ |
| ಎರಡನೆಯ ವರ್ಷದ ನಿಕ್ಕಿ ವೆಚ್ಚದ ಮೇಲೆ ಬಡ್ಡಿ ರೂ. ೨೯೧–೧–೬ ಕ್ಕೆ ೬–೪–೦ ಪ್ರಕಾರ | ... | ೧೮–೩–೦ |
| | ಒಟ್ಟು ರಾಸು | ೬೮–೭–೦ |
| | ನಿಕ್ಕಿ ಲಾಭ | ೧೧–೯–೦ |

## ೪ ನೆಯ ವರ್ಷ

| ಆದಾಯ : | | |
|---|---|---|
| ಉಪಬೆಳೆಯಿಂದ ಬರುವ ನಿಕ್ಕಿ ಲಾಭ | ... | ೬೦–೦–೦ |
| | ಒಟ್ಟು ರೂ. | ೬೦–೦–೦ |
| | ನಿಕ್ಕಿ ವೆಚ್ಚ | ೨೪–೭–೬ |
| **ವೆಚ್ಚ .** | | |
| ಗೊಬ್ಬರ .—ಸಗಣೀ ಗೊಬ್ಬರ ೨ ಗಾಡಿಗಳು | ... | ೩–೦–೦ |
| ಎಲುಬಿನ ಹುಡಿ ೧೪೪ ರತ್ತಲು | ... | ೬–೦–೦ |
| ನೀರು ಹಾಯಿಸುವ ವೆಚ್ಚ | ... | ೩೨–೦–೦ |
| ಸರಕಾರದ ತೆರಿಗೆ | ... | ೨–೦–೦ |
| ಕೊಡಿಕಟ್ಟುವ ವೆಚ್ಚ | ... | ೨೪–೦–೦ |
| ಮೂರನೆಯ ವರ್ಷದ ನಿಕ್ಕಿ ವೆಚ್ಚದ ಮೇಲೆ ಬಡ್ಡಿ ರೂ. ೨೭೯–೮–೬ ಕ್ಕೆ ೬–೪–೦ ಪ್ರಕಾರ | ... | ೧೭–೭–೬ |
| | ಒಟ್ಟು ರಾಸು | ೮೪–೭–೬ |

ನಾಲ್ಕನೆಯ ವರ್ಷ ಗಿಡಗಳಿಗೆಲ್ಲ ಕೊಡಿ ಕಟ್ಟಿಕೊಂಡ ಬಳಿಕ ಐದನೆಯ ವರ್ಷದಿಂದ ಅವುಗಳಿಗೆ ನೀರು ಹಾಯಿಸುವದು ಬೇಕಾಗಲಾರದು. ಈ ರೀತಿಯಲ್ಲಿ ನೀರು ಹಾಯಿಸುವದನ್ನು ಎರಡು ವರ್ಷಗಳಾದ ಕೂಡಲೆ ನಿಲ್ಲಿಸಬಹುದೆಂದು ಕೆಲವರ ಅಭಿಪ್ರಾಯವದೆ. ಯಾಕೆಂದರೆ ಸ್ಥಳದಲ್ಲೇ ಗೊರಟೆಗಳನ್ನು ನೆಟ್ಟು ಉತ್ತಮ ಸಸಿಗಳನ್ನು ಬೆಳೆಸಿಕೊಳ್ಳುವದರಿಂದ ಅವುಗಳ ಬೇರುಗಳು ಯಥೇಚ್ಛವಾಗಿ ನೆಲದಲ್ಲಿ ಪಸರಿಸಿ ದೂರದಿಂದಲೂ ಅನ್ನ ನೀರುಗಳನ್ನು ಸೇದಿಕೊಳ್ಳುತ್ತವೆ. ಮಣ್ಣಿನ ಕೆಳಗಿನ ಥರಗಳಲ್ಲಿ ಕೆಲಮಟ್ಟಿಗಾದರೂ ಹಸಿಯು ಯಾವಾಗಲೂ ಇದ್ದೇ ಇರುತ್ತದೆ. ಗೊರಟೆಯನ್ನು ನೆಟ್ಟು ಬೆಳೆಸಿದ ಸಸಿಗಳು ಈ ಹಸಿಯ ಉಪಯೋಗವನ್ನು ಮಾಡಿಕೊಳ್ಳುತ್ತವೆ. ಚೋರೆಯಲ್ಲಿ ಬೆಳೆಸಿದ ಗಿಡಗಳ ಬೇರುಗಳು ಕುಂಠಿತವಾಗುವದರಿಂದ ನೆಲದೊಳಗಿನ ಹಸಿಯ ಲಾಭವು ಅವುಗಳಿಗೆ ಸಾಕಷ್ಟು ದೊರೆಯುವದಿಲ್ಲ. ಹೀಗಿದ್ದರೂ ಸಸಿಗಳ ಮೇಲೆ ಕಟ್ಟಿದ ಕೊಡಿಗಳು ಚನ್ನಾಗಿ ಬಲಿಯುವ ವರೆಗೆ ಅಂದರೆ ನಾಲ್ಕು ವರ್ಷಗಳ ವರೆಗೆ ನೀರು ಹಾಯಿಸಿದರೆ ಗಿಡಗಳು ಜೋರಿನಿಂದ ಬೆಳೆಯುಬಹುದೆಂಬದು ಸಹಜ

ನಾಲ್ಕನೆಯ ವರ್ಷದ ತುದಿಗೆ ಒಟ್ಟು ೩೦೪ ರೂಪಾಯಿಗಳು ಒಂದು ಎಕರೆ ಮಾವಿನ ಗಿಡಗಳನ್ನು ಬೆಳೆಸಿ ಕೊಡಿಕಟ್ಟಿಕೊಳ್ಳುವದರಲ್ಲ ವೆಚ್ಚವಾಗುತ್ತವೆಂಬದನ್ನು ಮೇಲೆ ಕಂಡಿದ್ದೇವೆ. ಇದರಲ್ಲಿ ೩೦೦ ರೂಪಾಯಿಗಳು ನೆಲವನ್ನು ಕೊಳ್ಳುವದಕ್ಕೆ ಹೋಗಿರುತ್ತವೆ. ಅಂದರೆ ಸ್ವಂತದ ನೆಲವು ಇದ್ದರೆ ನಾಲ್ಕು ವರ್ಷಗಳಲ್ಲಿ ಒಟ್ಟಿನ ಮೇಲೆ ಬರೇ ನಾಲ್ಕು ರೂಪಾಯಿಗಳು ವೆಚ್ಚವಾಗುತ್ತವೆನ್ನಬಹುದು. ಐದನೆಯ ವರ್ಷದಿಂದ ವರ್ಷಕ್ಕೊಮ್ಮೆ ಗೊಬ್ಬರ ಹಾಕುವದು, ನೆಲವನ್ನು ಹೂಡಿ ಕಳೆ ತೆಗೆದು ಸ್ವಚ್ಛ ಮಾಡಿಡುವದು ಎಂಬವಿಷ್ಟೇ ಕೆಲಸಗಳು. ಒಂಭತ್ತು ವರ್ಷಗಳ ತನಕ ಉಪ ಬೆಳೆಗಳನ್ನು ಬೆಳೆಸಿಕೊಳ್ಳಬಹುದು. ಮಾವಿನ ಗಿಡಗಳು ಎಂಟನೆಯ ಅಥವಾ ಒಂಭತ್ತನೆಯ ವರ್ಷದಲ್ಲಿ ಅಂದರೆ ಕೊಡಿಕಟ್ಟಿದಂದಿನಿಂದ ನಾಲ್ಕೈದು ವರ್ಷಗಳಲ್ಲಿ ಫಲಕ್ಕೆ ಬರುತ್ತವೆನ್ನಬಹುದು ಮುಂದೆ ಅವುಗಳಿಂದ ಉತ್ಪನ್ನವು ಎಷ್ಟು ಬರುತ್ತದೆಂಬದನ್ನೂ ವೆಚ್ಚವು ಎಷ್ಟಾಗುತ್ತದೆಂಬದನ್ನೂ ಈ ಕೆಳಗಿನ ಕೋಷ್ಟಕದಿಂದ ಅರಿಯಬಹುದು.

| ಗಿಡಗಳ ವಯಸ್ಸು ವರ್ಷ | ತೋಟದ ವೆಚ್ಚ | ತೋಟದ ಆದಾಯ | | | ನಿಕ್ಕಿ ಲಾಭ + ಅಥವಾ ಹಾನಿ — | ನಿಕ್ಕಿ ಭಾಂಡವಲು ರಾಸು |
|---|---|---|---|---|---|---|
| | | ಉಪಬೆಳೆಯಿಂದ ನಿಕ್ಕಿ ಲಾಭ | ಮಾವಿನ ಕಾಯಿಗಳಿಂದ | | | |
| | | | ಸಂಖ್ಯೆ | ಬೆಲೆ | | |
| | ರೂ. ಆ. ಪೈ. | ರೂ. | | ರೂ. | ರೂ. ಆ. ಪೈ. | ಗೂ. ಆ. ಪೈ. |
| ೫ | ೪೪-೧೨-೦ | ೧೦೦* | ... | ... | + ೫೫-೪-೦ | ೨೪೮-೧೨-೦ |
| ೬ | ೪೪-೦-೯ | ೮೦ | ... | ... | + ೩೫-೧೫-೩ | ೨೧೨-೧೨-೯ |
| ೭ | ೪೪-೮-೯ | ೬೦ | ... | ... | + ೧೫-೭-೩ | ೧೯೭-೫-೬ |
| ೮ | ೪೬-೫-೬ | ೪೦ | ... | ... | − ೬-೫-೬ | ೨೦೩-೧೧-೦ |
| ೯ | ೪೯-೭-೯ | ೨೦ | ೪೮೦ | ೨೦ | − ೯-೭-೯ | ೨೧೩-೪-೯ |
| ೧೦ | ೫೦-೧-೩ | ... | ೧೨೦೦ | ೫೦ | − ೦-೧-೩ | ೨೧೩-೬-೦ |
| ೧೧ | ೫೦-೧-೩ | ... | ೬೪೦ | ೧೦ | − ೪೦-೧-೩ | ೨೫೩-೭-೩ |
| ೧೨ | ೫೨-೯-೬ | ... | ೮೬೪ | ೩೬ | − ೧೬-೯-೬ | ೨೭೦-೦-೯ |
| ೧೩ | ೫೩-೧೦-೦ | ... | ೧೧೦೪ | ೪೬ | − ೭-೧೦-೦ | ೨೭೭-೧೦-೯ |
| ೧೪ | ೫೪-೧-೯ | ... | ೭೬೮ | ೩೨ | − ೨೨-೧-೯ | ೨೯೯-೧೨-೬ |
| ೧೫ | ೫೫-೭-೯ | ... | ೧೯೨೦ | ೮೦ | + ೨೪-೮-೩ | ೨೭೫-೪-೩ |
| ೧೬ | ೫೩-೧೫-೩ | ... | ೩೦೭೨ | ೧೨೮ | + ೭೪-೦-೯ | ೨೦೧-೩-೬ |
| ೧೭ | ೪೯-೫-೦ | ... | ೧೪೪೦ | ೬೦ | + ೧೦-೧೧-೦ | ೧೯೦-೮-೬ |
| ೧೮ | ೪೮-೧೦-೩ | ... | ೩೯೮೪ | ೧೬೬ | + ೧೧೭-೫-೯ | ೭೩-೨-೯ |
| ೧೯ | ೪೧-೫-೦ | ... | ೪೮೦೦ | ೨೦೦ | + ೧೫೮-೧೧-೦ | ೮೫-೮-೩ |

ಈ ಕೋಷ್ಟಕದಿಂದ ಮಾವಿನ ಗಿಡಗಳು ಒಂಭತ್ತನೆಯ ವರ್ಷದಲ್ಲಿ ಫಲಕ್ಕೆ ಬಂದು, ಮುಂದೆ ಹದಿನೈದನೆಯ ವರ್ಷದಲ್ಲಿ ವಾರ್ಷಿಕ ವೆಚ್ಚವನ್ನೆಲ್ಲ ಕಳೆದು ಉಳಿತಾಯ ವಾಗುತ್ತದೆಂಬದು ತಿಳಿದು ಬರುವದು. ಹತ್ತೊಂಭತ್ತನೆಯ ವರ್ಷದಲ್ಲಿ ಮೂಲ ಭಾಂಡವಲು ಪೂರಾ ತಿರುಗಿ ಬಂದು ತೋಟವು ನಮ್ಮದಾಗಿ ಉತ್ಪನ್ನವು

*ನಾಲ್ಕನೆಯ ವರ್ಷದಲ್ಲಿ ಗಿಡಗಳಿಗೆ ಕೊಡಿಕಟ್ಟಿದ ಬಳಿಕ ಬೊಡ್ಡೆಯ ತುದಿಯನ್ನು ಕತ್ತರಿಸಿಬಿಡುವದರಿಂದ ಗಿಡದ ವಿಸ್ತಾರವು ಬಹಳ ಕಡಿಮೆಯಾಗುತ್ತದೆ. ಆದದರಿಂದ ಉಪಬೆಳೆಗೆ ತುಂಬಾ ಸ್ಥಳವು ದೊರೆಯುತ್ತದೆ. ಇದರ ಮುಂದೆ ಕೊಡಿಯು ಬೆಳೆದಂತೆ ಗಿಡಗಳು ವಿಸ್ತಾರವಾಗುತ್ತ ಹೋಗುತ್ತವೆ. ಉಪಬೆಳೆಗಳಿಗೆ ಸಿಗುವ ಸ್ಥಳವು ಕಡಿಮೆಯಾಗುತ್ತದೆ.

ಬರಲಾರಂಭಿಸುವದು. ಈ ವಿಚಾರದಲ್ಲಿ ಮೊದಲನೆಯ ಮತ್ತು ಎರಡನೆಯ ರೀತಿಗಳಲ್ಲಿ ವಿಶೇಷ ಅಂತರವಿಲ್ಲ. ಆದರೆ ಮೊದಲನೆಯ ರೀತಿಯಲ್ಲಿ ಭಾಂಡವಲು ಹೆಚ್ಚು ಬೇಕಾಗುವದು. ಗಿಡಗಳು ಬೇಗನೆ ಫಲಕ್ಕೆ ಬರುತ್ತವೆ.

**ರೋಗಾದಿಗಳು :**—ಮಾವಿನ ಗಿಡಗಳು ಸಣ್ಣವಿರುವಾಗ ಎಳೆ ಚಿಗುರುಗಳನ್ನೂ ಎಲೆಗಳನ್ನೂ ತಿನ್ನುವ ಅನೇಕ ತರದ ಹುಳಗಳು ಅವುಗಳ ಮೇಲೆ ಕಂಡು ಬರುತ್ತವೆ. ಈ ಹುಳಗಳಲ್ಲಿ ಕೆಲವು ಎಲೆಗಳ ಹಿಂಬದಿಯಲ್ಲಿ ತತ್ತಿ ಇಟ್ಟು ತಮ್ಮ ಪೀಳಿಗೆಯನ್ನು ಬೆಳೆಸುತ್ತವೆ. ಕೆಲವು ಕಂಬಳೀ ಹುಳದಂತೆ ರೋಣೆಗಳುಳ್ಳವಿರುತ್ತವೆ. ಇನ್ನು ಕೆಲವು ಎಲೆಯ ಬಣ್ಣದಂತೆ ಹಚ್ಚಗಿರುವದರಿಂದ ಅವುಗಳನ್ನು ಹುಡುಕಿ ತೆಗೆಯುವದು ತುಸು ಕಠಿಣ. ಈ ಹುಳಗಳೆಲ್ಲ ಚಿಗುರುಗಳನ್ನೂ ಎಲೆಗಳನ್ನೂ ತಿಂದು ಗಿಡವನ್ನು ಬರಲು ಮಾಡಿ ಅಪಾಯಪಡಿಸುತ್ತವೆ ಅಲ್ಲಲ್ಲಿ ತೂತು ಬಿದ್ದು ಹರಿದು ತಿಂದಂತೆ ಕಾಣುವ ಎಲೆಗಳನ್ನು ನೋಡಿದ ಕೂಡಲೆ ಗಿಡಕ್ಕೆ ಹುಳ ಬಿದ್ದಿದೆಯೆಂದು ತಿಳಿಯಬೇಕು. ಈ ಹುಳಗಳನ್ನೆಲ್ಲ ಕಯ್ಯಿಂದ ಆರಿಸಿ ತೆಗೆದು ಹಿಚಿಕಿ ಕೊಲ್ಲಬೇಕು. ಗಿಡಗಳಿಗೆ 'ಬೋರ್ಡೋ' ಮಿಶ್ರಣ* ಇಲ್ಲವೆ 'ಲೆಡ್ ಆರ್ಸನೇಟ್' ಎಂಬ ಔಷಧಗಳ ನೀರನ್ನು ಪಿಚಕಾರಿಯಿಂದ ಸಿಂಪಡಿಸಬೇಕು. ಇವು ವಿಷಗಳಾದ್ದರಿಂದ ಇವುಗಳನ್ನು ಸಿಂಪಡಿಸಿದ ಎಲೆಯ ಚೂರುಗಳನ್ನು ತಿಂದ ಕೂಡಲೆ ಹುಳಗಳೆಲ್ಲ ಸಾಯುತ್ತವೆ. ಅವುಗಳ ಪೀಳಿಗೆಯೂ ಮುಂದೆ ಬೆಳೆಯುವದಿಲ್ಲ.

ಈ ಹುಳಗಳಲ್ಲದೆ ಇನ್ನೊಂದು ಜಾತಿಯ ಚಿಕ್ಕ ಕೆಂದು ವರ್ಣದ ಹುಳಗಳು ಟಿಸಿಲುಗಳ ತುದಿಗೆ ನಾಲ್ಕಾರು ಎಲೆಗಳನ್ನು ಕೂಡಿಸಿ ಜಾಳಿಗೆಯಿಂದ ಕಟ್ಟಿ ಗೂಡು ಮಾಡಿಕೊಂಡು ಅದರಲ್ಲಿ ಇರುತ್ತವೆ. ಎಲೆಗಳನ್ನೆಲ್ಲ ತಿನ್ನುತ್ತವೆ. ಈ ಗೂಡುಗಳು ದೂರದಿಂದ ಕೆಂಪು ಇರುವೆಗಳ ಗೂಡಿನಂತೆ ಕಂಡರೂ, ಇವುಗಳಲ್ಲಿ ಎಲೆಗಳನ್ನು ತಿಂದು ಒಣಗಿಸಿದ್ದು ಕಂಡುಬರುತ್ತದೆ. ಇರುವೆಗಳು ಎಲೆಗಳನ್ನು ತಿನ್ನುವದಿಲ್ಲ. ಈ ಹುಳಗಳು ಗೂಡನ್ನು ಮುಟ್ಟಿದಕೂಡಲೆ ನೆಲಕ್ಕೆ ಬಿದ್ದು ಅಡಗಿಕೊಳ್ಳುತ್ತವೆ. ಆದದರಿಂದ ಗೂಡುಗಳನ್ನು ಅಲ್ಲಾಡಿಸದೆ ಡಬ್ಬಿಯಲ್ಲಾಗಲಿ ಚೀಲದಲ್ಲಾಗಲಿ ಹಿಡಿದು ಟಿಸಿಲನ್ನು ಕತ್ತರಿಸಿ ಸುಟ್ಟುಬಿಡಬೇಕು. ದೊಡ್ಡ ಮರಗಳಿಗೆ ಇವುಗಳಿಂದ ಹೆಚ್ಚಿನ ಅಪಾಯವಾಗುವದಿಲ್ಲ.

---

* 'ಬೋರ್ಡೋ' ಮಿಶ್ರಣವನ್ನು ಸಿದ್ಧಪಡಿಸಿಕೊಳ್ಳುವ ಕ್ರಮವನ್ನು ದ್ರಾಕ್ಷೆಯ ಪ್ರಕರಣದಲ್ಲಿ ಸವಿಸ್ತರವಾಗಿ ಕೊಟ್ಟಿದ್ದೇವೆ.

ದೊಡ್ಡ ಮರಗಳಿಗೆ ಅಪಾಯಮಾಡುವ ಹುಳಗಳೂ ರೋಗಗಳೂ ಬೇರೆ. ಅವುಗಳಲ್ಲಿ ಮುಖ್ಯವಾದವು ಯಾವವೆಂದರೆ:—

೧. "ಛಿರೂಡ" ಎಂದು ಕರೆಯಲ್ಪಡುವ ಹುಳವು ತುಂಬೆಯ ಜಾತಿಯದು. ಗೊಬ್ಬರದ ಹುಳದಂತೆ ಕಾಣುವ ಈ ಹುಳಗಳು ಬಿಳೀ ವರ್ಣದವು. ಕೆಂದು ತಲೆಯುಳ್ಳವು. ಇವುಗಳ ತತ್ತಿಗಳು ಮರದ ತೊಗಟೆಯಲ್ಲಿ ಇಡಲ್ಪಡುತ್ತವೆ. ಮರಿಗಳು ಹೊರಬಿದ್ದೊಡನೆ ತೊಗಟೆಯನ್ನು ತಿನ್ನುತ್ತವೆ. ದೊಡ್ಡವಾದ ಬಳಿಕ ಮರದ ಎಲುಬಿನಲ್ಲಿ ತೂತು ಕೆಡವಿ ಒಳಕ್ಕೆ ತಿನ್ನುತ್ತ ಹೋಗುತ್ತವೆ. ಇವು ಮರದಲ್ಲಿ ನಾಲ್ಕಾರು ಫೂಟು ಉದ್ದನ್ನ ತೂತುಗಳನ್ನು ಸಹ ಕೆಡುವುತ್ತವೆ. ಇವು ಒಳಗೆ ತಿನ್ನುತ್ತಿರುವಾಗ ತೂತಿನ ಬಾಯಿಂದ ಮರದ ಹೊಸ ಪುಡಿಯು ಹೊರಬೀಳುತ್ತದೆ. ಹುಳಗಳ ಮಲದ ಜಾಳಿಗೆಗಳೂ ಕಂಡು ಬರುತ್ತವೆ. ಈ ಚಿನ್ಹಗಳಿಂದ ಇಂಥಲ್ಲೇ ಹುಳವು ಕೆದರುತ್ತಿರುವದೆಂಬದನ್ನು ಕಂಡು ಹಿಡಿಯಬಹುದು. ವಿಶೇಷವಾಗಿ ಹಳೇ ಮರಗಳಲ್ಲಿ ಈ ಹುಳಗಳು ಬಹಳ. ಇವುಗಳಿಂದ ಇಡೀ ಮಾವಿನ ಮರಗಳೇ ನಾಶಹೊಂದುತ್ತವೆ. ಈ ಹುಳಗಳನ್ನು ನಾಶ ಮಾಡುವದಕ್ಕೆ ಅವು ಇರುವ ತೂತುಗಳನ್ನು ಗೊತ್ತು ಹಚ್ಚಿ ಕಬ್ಬಿಣದ ಸಪೂರಾದ ಸರಿಗೆಯಿಂದ ಅವುಗಳನ್ನು ಎಳೆದು ಹೊರಗೆ ತೆಗೆದು ಕೊಲ್ಲಬೇಕು. ಸರಿಗೆಯ ತುದಿಯನ್ನು ನಣ್ಣ ಕೊಂಡಿಯಂತೆ ಮಣಿಸಿಕೊಳ್ಳಬೇಕು. ಹುಳಗಳನ್ನು ತೆಗೆದ ಬಳಿಕ ತೂತಿನ ಬಾಯನ್ನು ಮಣ್ಣಿನಿಂದ ಮುಚ್ಚಬೇಕು. ಗಾಯಪಟ್ಟ ಮರದ ಭಾಗದ ಮೇಲೆ ಟಾಂಬರವನ್ನು ಹಚ್ಚಬೇಕು. ಹುಳಗಳನ್ನು ತೆಗೆಯುವದಾಗದಿದ್ದರೆ, ಮೂರು ಭಾಗ 'ಕ್ಲೋರೋಫಾರ್ಮ'ದಲ್ಲಿ ಒಂದು ಭಾಗ 'ಕ್ರಿಓಸೋಟ'ವನ್ನು ಬೆರಿಸಿ, ಈ ಮಿಶ್ರಣವನ್ನು ಅರ್ಧ ಚಮಚೆಯಷ್ಟು ತೂತುಗಳಲ್ಲಿ ಸುರವಬೇಕು. ಕೂಡಲೆ ತೂತುಗಳನ್ನೆಲ್ಲ ಮಣ್ಣಿನಿಂದ ಮುಚ್ಚಬೇಕು. ಈ ಔಷಧದಿಂದ ಹುಳಗಳು ಒಳಗೆ ಉಸುರುಗಟ್ಟಿ ಸಾಯುತ್ತವೆ. ಕ್ಲೋರೋಫಾರ್ಮ, ಕ್ರಿಓಸೋಟಗಳು ಸಿಗದಿದ್ದರೆ, 'ಪೆಟ್ರೋಲ' ಎಣ್ಣೆಯನ್ನು ಅರ್ಧ ಔನ್ಸು ಉಪಯೋಗಿನಬಹುದು.

ಒಂದೇ ಮರದಲ್ಲಿ ಹತ್ತಿಪ್ಪತ್ತು ಹುಳಗಳು ಸಹ ಇರಬಹುದು. ಅವುಗಳನ್ನೆಲ್ಲ ನಾಶಪಡಿಸದಿದ್ದರೆ, ಉಳಿದ ಹುಳಗಳು ಮತ್ತೆ ವೃದ್ಧಿಯಾಗಿ ಹಾನಿಯಾಗಬಹುದು. ಪ್ರತಿಯೊಂದು ತೋಟದಲ್ಲೂ ಇರುವ ಎಲ್ಲ ಮರಗಳಲ್ಲಿದ್ದ ಹುಳಗಳನ್ನೂ ಒಮ್ಮೆಲೆ ನಾಶಪಡಿಸಬೇಕು. ಇಲ್ಲವಾದರೆ ಅವು ಮರದಿಂದ ಮರಕ್ಕೆ ಪಸರಿಸುತ್ತವೆ. ಬಹು ಎತ್ತರದ ಮರಗಳಲ್ಲಿ ಈ ಹುಳಗಳನ್ನೆಲ್ಲ ನಾಶ ಮಾಡುವದು ಸಾಧ್ಯವಲ್ಲದ್ದರಿಂದ ಅವು ಪಸರಿಸದಂತೆ ಮೊದಲೇ ಎಚ್ಚರಪಡಬೇಕು.

೨. **"ಜಿಗಿ ಹುಳಗಳು"** ಎಂದು ಕರೆಯಲ್ಪಡುವ ಸಾವಿರಗಟ್ಲೆ ಸಣ್ಣ ಸಣ್ಣ ಹುಳಗಳು ಮಾವಿನ ಹೂವುಗಳಾಗುವ ಸಮಯದಲ್ಲಿ ಮರದ ಮೇಲೆ ಜಿಗಿದಾಡುತ್ತ ಹೂವುಗಳನ್ನೂ ಮಿಡಿಗಳನ್ನೂ ಉದುರಿಸಿ ಬಹಳ ಹಾನಿಯನ್ನುಂಟುಮಾಡುತ್ತವೆ. ಈ ಹುಳಗಳು ಮಾವಿನ ಎಲೆಗಳನ್ನೆಲ್ಲ ಮುಚ್ಚಿಬಿಡುವ ಕಾಡಿಗೆ (ಭೂಸರ) ರೋಗವನ್ನೂ ವೃದ್ಧಿಪಡಿಸಿ ಇವೆರಡೂ ಜೊತೆಯಲ್ಲಿ ಹೂಕಾಯಿಗಳ ಅಪಾರ ಹಾನಿಯನ್ನುಂಟುಮಾಡುವದರಿಂದ ಇವೆರಡನ್ನೂ ಇಲ್ಲಿ ವಿವರಿಸಿ ಉಪಾಯವನ್ನು ಸೂಚಿಸಿರುತ್ತೇವೆ. ಈ ವಿಷಯದಲ್ಲಿ ಮುಂಬಯಿ ಇಲಾಖೆಯ ಬೇಸಾಯ ಖಾತೆಯ ಸನ್ ೧೯೩೦ ನೇ ಇಸವಿಯ ಹಸ್ತಪತ್ರಿಕೆ ನಂಬರು ೬ ರಲ್ಲಿ ಕೊಟ್ಟ ಮಾಹಿತಿಯು ಬಹು ಉಪಯುಕ್ತವಾಗಿರುತ್ತದೆ. ಅದರ ಮುಖ್ಯಾಂಶವನ್ನೇ ನಾವಿಲ್ಲಿ ಅವತರಿಸಿಕೊಂಡಿದ್ದೇವೆ.

ಮಾವಿನ ಬೆಳಿಗೆ ಹಾನಿಯನ್ನುಂಟುಮಾಡುವ ಮುಖ್ಯ ಕಾರಣಗಳು ಎರಡು. ಒಂದು **ಜಿಗಿ ಹುಳ,** ಇನ್ನೊಂದು **ಭೂಸರ** ಅಥವಾ ಭುರೀ ರೋಗ. ಸಾಧಾರಣವಾಗಿ ಮೋಡಗಳಿಂದ ಹೂಕಾಯಿಗಳು ಉದುರುತ್ತವೆಂದು ಜನರ ತಿಳುವಳಿಕೆಯುಂಟು. ಆದರೆ ಜಿಗಿಹುಳ-ಭೂಸರ ರೋಗಗಳೇ ಇದಕ್ಕೆ ಮುಖ್ಯ ಕಾರಣಗಳಾಗಿರುತ್ತವೆ ಮೋಡದಿಂದ ಇವುಗಳ ಅಭಿವೃದ್ಧಿಯು ಮಾತ್ರ ಆಗುತ್ತಿರಬಹುದು.

ಸಾಮಾನ್ಯವಾಗಿ ಮಾವಿನ ಮರಗಳು ಮೂರು ಸಾರೆ ಹೂ ಬಿಡುತ್ತವೆ ಮೊದಲನೇ ಸಾರೆ ಕಾರ್ತಿಕ-ಮಾರ್ಗಶೀರ್ಷಗಳಲ್ಲಿ, ಎರಡನೇ ಸಾರೆ ಪುಷ್ಯಮಾಸದಲ್ಲಿ, ಮತ್ತು ಮೂರನೇ ಸಾರೆ ಮಾಘದಲ್ಲಿ; ಮೊದಲನೇ ಸಾರೆ ಬಿಟ್ಟ ಹೂವುಗಳಿಗೆ ಹುಳವಾಗಲಿ ರೋಗವಾಗಲಿ ಆಗುವದಿಲ್ಲ ಎರಡನೇ ಸಾರೆಯ ಹೂವುಗಳಿಗೆ ಜಿಗಿ ಹುಳಗಳಿಂದಲೂ ಮೂರನೇ ಸಾರೆಯ ಹೂವುಗಳಿಗೆ ಭೂಸರ ರೋಗದಿಂದಲೂ ಅಪಾರ ಹಾನಿಯಾಗುತ್ತದೆ.

ಜಿಗಿ ಹುಳವು ತಗಣೀ ಜಾತಿಯದು. ಬೆಣೆಯಂಥ ಆಕಾರವುಳ್ಳದ್ದು. ಮರಗಳು ಹೂ ಬಿಡುವಾಗ ಈ ಹುಳಗಳು ಹೂವಿನ ಮೊಗ್ಗೆಗಳಲ್ಲಿ ತತ್ತಿ ಇಡುತ್ತವೆ. ತತ್ತಿಗಳು ನಾಲ್ಕಾರು ದಿನಗಳಲ್ಲಿ ಒಡೆದು ಸಣ್ಣ ಮರಿಗಳು ಹೊರಬೀಳುತ್ತವೆ. ಮರಿಗಳಿಗೆ ರೆಕ್ಕೆಗಳಿರುವದಿಲ್ಲ. ಅವು ಮುಂದೆ ಹತ್ತು ಹನ್ನೆರಡು ದಿನಗಳಲ್ಲಿ ನಾಲ್ಕು ಸಾರೆ ಪರೆಯನ್ನುಚ್ಚಿ ದೊಡ್ಡವಾದ ಬಳಿಕ ಅವುಗಳಿಗೆ ರೆಕ್ಕೆಗಳು ಮೂಡುತ್ತವೆ. ಈ ಸಣ್ಣ ದೊಡ್ಡ ಹುಳಗಳೆಲ್ಲ ಒಂದೇ ಸವನೆ ಹೂವು ಮಿಡಿಗಳೊಳಗಿನ ರಸವನ್ನು ಸೇದಿಕೊಳ್ಳುವದರಿಂದ ಅವು ಬಾಡಿ ಉದುರುತ್ತವೆ. ಜಿಗಿ ಹುಳಗಳ ಮೈಯೊಳಗಿಂದ ಹೊರಬೀಳುವ ಜೇನುತುಪ್ಪದಂಥ ಒಂದು ತರದ ಜಿಗಟು ಪದಾ

ರ್ಗವು ಹೂವು ಮಿಡಿಗಳ ಮೇಲೆ ಬೀಳುವದರಿಂದ ಅವು ಮುಂದೆ ಬೆಳೆಯುವದಿಲ್ಲ. ಅವು ವನಸ್ಪತಿಜನ್ಯವಾದ ಭೂಸರ ರೋಗದಿಂದ ಮುಚ್ಚಿ ಹೋಗಿ ಕಪ್ಪಾಗಿ ಕಾಣುತ್ತವೆ. ಟೊಂಗೆಗಳೂ ಎಲೆಗಳೂ ಅಲ್ಲಾಡಿದ ಕೂಡಲೆ ಜಿಗಿ ಹುಳಗಳು ಅತ್ತಿತ್ತ ಜಿಗಿದಾಡುವದರಿಂದ ಹೂವುಮಿಡಿಗಳು ಉದುರುವದು ಹೆಚ್ಚಾಗುತ್ತದೆ.

ಮಾವಿನ ಹೂವುಗಳು ಹಿಟ್ಟು ಬಡಿದಂತೆ ಬಿಳುಪಾದೊಡನೆ ಅವುಗಳಿಗೆ ಭೂಸರ ರೋಗವಾಗಿದೆಯೆಂದು ತಿಳಿಯಬೇಕು ಈ ರೋಗವು ಮೊದಲು ಎಳೇ ಗೊಂಚಲುಗಳ ತುದಿಯ ಮೊಗ್ಗೆಗಳ ಮೇಲೆ ಕಂಡುಬರುವದು. ಕ್ರಮೇಣ ಹೂವುಗಳ ದಂಟುಗಳ ಮೇಲೂ ಗೊಂಚಲಿನ ಕೆಳಭಾಗದಲ್ಲೂ ಅದು ಪಸರಿಸುತ್ತದೆ. ಈ ರೋಗದ ಸೂಕ್ಷ್ಮಬೀಜಗಳು ಗಾಳಿಯಿಂದ ಹಾರಿ ಬೇರೆ ಮೊಗ್ಗೆಗಳ ಮೇಲೆ ಬಿದ್ದು ಅಲ್ಲೂ ಈ ರೋಗವು ಉದ್ಭವಿಸಿ ಐದು ದಿನಗಳೊಳಗೇ ಪುನಃ ಹೊಸ ಬೀಜಗಳು ಉಂಟಾಗುತ್ತವೆ ಈ ಪ್ರಕಾರ ಅನುಕೂಲ ಪರಿಸ್ಥಿತಿಯು ಇರುವ ತನಕ ಬೀಜೋತ್ಪತ್ತಿಯೂ ರೋಗದ ಪ್ರಸಾರವೂ ಒಂದೇ ಸವನೆ ನಡೆಯುವವು. ಇದರ ಮೇಲಿಂದ ಈ ರೋಗವು ಮೊದಲು ಅಲ್ಪ ಪ್ರಮಾಣದಲ್ಲಿದ್ದರೂ ಅನುಕೂಲ ಪರಿಸ್ಥಿತಿಯಲ್ಲಿ ಎಷ್ಟು ಬೇಗ ಪಸರಿಸುತ್ತಗೆಂಬದು ಕಂಡುಬರುವದು ರೋಗವಾದ ಗೊಂಚಲುಗಳ ಮೇಲೆ ಅದರ ಅಸಂಖ್ಯ ಬೀಜಗಳು ಉತ್ಪನ್ನವಾಗುವದರಿಂದಲೂ ಅವುಗಳ ಬಣ್ಣವು ಬಿಳೇದಿರುವದರಿಂದಲೂ ಆ ಗೊಂಚಲುಗಳ ಬಣ್ಣವು ಬೂದಿಯಂತೆ ಕಾಣುವದು. ಈ ಭೂಸರ ರೋಗದ ವನಸ್ಪತಿಗಳು ಹೂ ಕಾಯಿಗಳೊಳಗಿನ ರಸದಿಂದ ಬೆಳೆಯುವದರಿಂದ ಅವು ಒಣಗಿ ಬೀಳುತ್ತವೆ. ಈ ರೋಗವು "ಜಿಗಿ" ಹುಳದಷ್ಟು ಹಾನಿಕರವಲ್ಲ. ಇದು ನೂರಕ್ಕೆ ೧೫ ರಿಂದ ೨೦ ರಷ್ಟು ಹಾನಿ ಮಾಡುವದು.

ಇವೆರಡರ ಮೇಲೂ ಬೇರೆ ಬೇರೆ ಅನೇಕ ಔಷಧಗಳ ಪ್ರಯೋಗ ಮಾಡಿ ನೋಡಲಾಗಿ, ಗಂಧಕದ ಪುಡಿಯೇ ಹೆಚ್ಚು ಗುಣಕಾರಿಯೂ ಅಗ್ಗವಾದದ್ದೂ ಎಂದು ಕಂಡುಬಂದಿದೆ ಗಂಧಕದ ಪುಡಿಯನ್ನು ಪ್ರಥಮಾವಸ್ಥೆಯಲ್ಲಿಯೇ ಉಪಯೋಗಿಸಿದರೆ ಜಿಗಿ ಹುಳದ ಅಥವಾ ಭೂಸರ ರೋಗದ ಉತ್ಪತ್ತಿಯಾಗುವ ಸಂಭವವೇ ಇರಲಿಕ್ಕಿಲ್ಲ. ರೋಗವಾದ ಮೇಲೆ ಗಂಧಕದ ಪುಡಿಯನ್ನು ಉಪಯೋಗಿಸಿದರೆ ಭೂಸರ ರೋಗವು ನಾಶ ಹೊಂದುವದು

"ಜಿಗಿ" ಹುಳದ ಕಾಟವು ಬಹಳವಾಗಿದ್ದರೆ ಗಂಧಕದ ಪುಡಿಯನ್ನು ಹಾರಿಸಿದ ಮೂರು-ನಾಲ್ಕು ದಿವಸಗಳಲ್ಲೇ ರೆಕ್ಕೆಗಳಿಲ್ಲದ ಹುಳಗಳು ನೆಲಕ್ಕೆ ಉದುರಿ ಬಿದ್ದು ಸಾಯುವವು. ಗಂಧಕದ ವಾಸನೆಯಿಂದ ರೆಕ್ಕೆ ಹುಟ್ಟಿದ ಹುಳಗಳು ಸಹ ಮಾವಿನ ಗೊಂಚಲುಗಳ ಸಮೀಪಕ್ಕೆ ಬರುವದಿಲ್ಲ. ಆದದರಿಂದ ಅವು ತಮ್ಮ

ತತ್ತಿಗಳನ್ನು ಹೂವುಗಳೊಳಗೆ ಇಡಲಾರವು. ಗಂಧಕದ ಪುಡಿಯು ಮಾತ್ರ ಒಂದು ಚೌರಸ ಇಂಚಿನೊಳಗೆ ೨೦೦ ರಂಧ್ರಗಳಿರುವಂಥ ಸಾಣಿಗೆಯಿಂದ ಸಾಣಿಸಬಹು ದಾದಷ್ಟು ಸೂಕ್ಷ್ಮವಿರಬೇಕು. ಸೂಕ್ಷ್ಮವಿಲ್ಲದೇ ಇದ್ದಲ್ಲಿ ಅದರ ಉಪಯೋಗವು ಅಷ್ಟು ಆಗುವದಿಲ್ಲ.

ಈ ಪ್ರಕಾರದ ಗಂಧಕದ ಹುಡಿಯು ಈಗ ಹಿಂದುಸ್ಥಾನದೊಳಗೆ ಮುಂಬ ಯಿಯಂಥ ದೊಡ್ಡ ದೊಡ್ಡ ಶಹರಗಳಲ್ಲಿ ಸಿಗುತ್ತದೆ. ಅದರ ರೋಕ ದರವು ಟನ್ನಿಗೆ ೧೮೦-೦-೦ ರೂಪಾಯಿಗಳಿರುತ್ತದೆ. ಮತ್ತು ಚಿಲ್ಲರೆ ದರವು ೧೮೫-೦-೦ ರೂಪಾಯಿಗಳಾಗುತ್ತದೆ.

ಗಂಧಕದ ಪುಡಿಯನ್ನು ಯಂತ್ರದ ಸಹಾಯದಿಂದ ಚನ್ನಾಗಿ ಹೂಗಳ ಮೇಲೆ ಹಾರಿಸಲಿಕ್ಕೆ ಬರುತ್ತದೆ. ಪುಡಿ ಹಾರಿಸುವ "ಪಿಯರಲೆಸ್ ಡಸ್ಟ ಗನ್" ಎಂಬ ಯಂತ್ರವು ಎಲ್ಲಕ್ಕೂ ಮಿಗಿಲಾದದ್ದು. ಇದು ಮೆಸರ್ಸ ಧರಮಸೀ ಮುರಾರಜೀ ಕೆಮಿಕಲ್ ಕಂಪನಿ ಲಿಮಿಟೆಡ್, ಸುಧಾಮಾ ಹೌಸ್, ೩೧ ಸ್ಟ್ರೀಟ್ ರೋಡ, ಬೆಲಾರ್ಡ ಎಸ್ಟೇಟ್, ಫೋರ್ಟ-ಮುಂಬಯಿ, ಇವರಲ್ಲಿ ದೊರೆಯುತ್ತದೆ. ಇದರ ಬೆಲೆಯು ೫೬-೦-೦ ರೂಪಾಯಿಗಳು. ಈ ಯಂತ್ರದಿಂದ ೧೨-೧೫ ಫೂಟು ಮೇಲಕ್ಕೆ ಹುಡಿಯನ್ನು ಹಾರಿಸಬಹುದು ಇದಕ್ಕಿಂತಲೂ ಎತ್ತರದ ಗಿಡಗಳಿದ್ದಲ್ಲಿ ಮಡಚಲಿಕ್ಕೆ ಆಗುವಂಥ ಮತ್ತು ಮೇಲೆ ಕೈ ಬಿಟ್ಟು ನಿಲ್ಲುವದಕ್ಕೆ ಬರುವಂಥ ಏಣಿಗಳನ್ನು ಉಪಯೋಗಿಸಬೇಕಾಗುವದು.

ಗಂಧಕದ ಪುಡಿಯನ್ನು ಎಷ್ಟು ಸಾರೆ ಹೊಡೆಯಬೇಕೆಂಬದು ಹುಳದ ಮತ್ತು ರೋಗದ ಪ್ರಸಾರ ಹಾಗೂ ಪ್ರಮಾಣದ ಮೇಲೆ ಅವಲಂಬಿಸಿರುತ್ತದೆ. ಆದರೂ ಈ ಕೆಳಗೆ ಕೊಟ್ಟ ಕಾಲದಲ್ಲಿ ಗಂಧಕವನ್ನು ಹಾರಿಸಿದರೆ ಹುಳಗಳಿಂ ದಲೂ ರೋಗದಿಂದಲೂ ಆಗುವ ಬಾಧೆಯನ್ನು ಪೂರ್ಣವಾಗಿ ತಪ್ಪಿಸಲಿಕ್ಕೆ ಬರಬಹುದು :—

(೧) ಹೂ ಬಿಡಲಿಕ್ಕೆ ಆರಂಭವಾದ ಕೂಡಲೆ ಮೊದಲನೇ ಸಾರೆ ಈ ಪುಡಿ ಯನ್ನು ಹಾರಿಸಬೇಕು. ಇದರಿಂದ ಹುಳ ಮತ್ತು ರೋಗ ಇವೆರಡರ ಪ್ರತಿಬಂಧ ವಾಗುವದರಿಂದಲೂ ಈ ಕಾಲವೇ ಎಲ್ಲಕ್ಕೂ ಹೆಚ್ಚು ಮಹತ್ವದ್ದಿರುವದರಿಂದಲೂ ಎಚ್ಚರದಿಂದ ಸಾಕಷ್ಟು ಪುಡಿ ಹಾರಿಸುವದು ಅತ್ಯವಶ್ಯವಿರುತ್ತದೆ.

(೨) ಮೊದಲನೇ ಸಾರೆ ಔಷಧ ಹಾರಿಸಿ ೧೫ ದಿವಸಗಳಾದ ಮೇಲೆ ೨ನೇ ಸಾರೆಯೂ, ಮುಂದೆ ೧೫ ದಿವಸಗಳಾದ ಮೇಲೆ ೩ ನೇ ಸಾರೆಯೂ ಗಂಧಕವನ್ನು ಎಲ್ಲಾ ಗೊಂಚಲುಗಳ ಮೇಲೂ ಒಂದೇ ಸವನಾಗಿ ಬೀಳುವಂತೆ ಹಾರಿಸಬೇಕು.

ಆದರೆ ಗಂಧಕ ಹಾರಿಸಿದ ಬಳಿಕ ಬಿಸಿಲು ಬೀಳದೆ ೩-೪ ದಿವಸಗಳಲ್ಲೇ ಮಳೆಯಿಂದ ಗಂಧಕವು ತೊಳೆದು ಹೋದರೆ ಪುನಃ ಅದನ್ನು ಹಾರಿಸಬೇಕು.

ಹಗಲಿನಲ್ಲಿ ಬೇಕಾದಾಗ ಗಂಧಕದ ಪುಡಿಯನ್ನು ಹಾರಿಸಬಹುದು. ಬಿರುಗಾಳಿಯಿದ್ದಾಗ ಹಾರಿಸಿದರೆ ಅದು ವ್ಯರ್ಥವಾಗಿ ಹೋಗುವದು. ಆದರೆ ಮಂದಗಾಳಿಯು ಇದ್ದಾಗ ಔಷಧವನ್ನು ಗಿಡಗಳ ಮೇಲೆ ಸರಿಯಾಗಿ ಹಾರಿಸಬಹುದು. ಗಾಳಿ ಇಲ್ಲದೇ ಇರುವಾಗ ಗಂಧಕದ ಪುಡಿಯನ್ನು ಹಾರಿಸುವದು ಉತ್ತಮವು.

ಸುಮಾರು ೨೫ ಫೂಟು ಎತ್ತರದ ಮಾವಿನ ಮರಕ್ಕೆ ಮೂರು ಸಾರೆ ಗಂಧಕವನ್ನು ಹಾರಿಸಲಿಕ್ಕೆ ಈ ಕೆಳಗಿನಂತೆ ವೆಚ್ಚವು ಬರುತ್ತದೆ.— ರೂ.ಆ.ಪೈ.

| | | |
|---|---|---|
| ೬೪ ರತ್ತಲು ಗಂಧಕದ ಪುಡಿ (೩ ಸಾರೆ ಹಾರಿಸುವದಕ್ಕೆ) ಟನ್ನಿಗೆ ೧೮೫-೦-೦ ರೂಪಾಯಿಗಳ ಪ್ರಕಾರ | ... | ೦-೧೧-೦ |
| ೧ ಆಳಿನ ೩ ತಾಸು ೪೮ ಮಿನುಟುಗಳ ಕೂಲಿ (೩ ಸಾರೆ ಹಾರಿಸುವದಕ್ಕೆ) ದಿನಾ ೧೦ ಆಣೆಗಳ ಪ್ರಕಾರ | ... | ೦- ೪-೯ |
| ಒಟ್ಟು ವೆಚ್ಚ ರೂ. | | ೦-೧೫-೯ |

ಗಂಧಕ ಹಾರಿಸಿದ ಪ್ರತಿಯೊಂದು ಗಿಡದ ಮೇಲೆ ೭-೮ ರೂಪಾಯಿಗಳ ನಿಕ್ಕಿ ಆದಾಯವಾಗಿದೆ.

ಮರಗಳ ಮೇಲೆ ಗಂಧಕದ ಪುಡಿಯನ್ನು ಹಾರಿಸುವಾಗ ಕೆಲಸ ಮಾಡುವವನು ಗಾಳಿಯಬದಿಗೆ ತನ್ನ ಬೆನ್ನು ಮಾಡಬೇಕು. ಇಲ್ಲದಿದ್ದರೆ ಗಂಧಕವು ಕಣ್ಣೊಳಗೆ ಸೇರಿ ನೋವು ಆಗುವ ಸಂಭವವಿರುತ್ತದೆ. ಈ ನೋವಿನಿಂದ ಕಣ್ಣು ಬೀಗಿದರೆ ಒಂದು ಚಮಚೆ "ಸೋಡಾ ಬ್ಯಾಕಾರ್ಬನೇಟ" (ತಿನ್ನುವ ಸೋಡಾ)ವನ್ನು ಒಂದು ಥಾಲಿ ತುಂಬ ನೀರಿನಲ್ಲಿ ಹಾಕಿ ಆ ನೀರಿನಿಂದ ಕಣ್ಣು ತೊಳೆದುಕೊಂಡರೆ ತತ್‌ಕ್ಷಣವೇ ನೋವು ಕಡಿಮೆಯಾಗಿ ಕಣ್ಣುಗಳು ಸ್ವಚ್ಛವಾಗುವವು

**೩. ಸುಂಗು ಹುಳಗಳು :**—ಮಳೆಗಾಲದಲ್ಲಿ ಮಾವಿನ ಎಲೆಗಳ ಮೇಲೆ ಹಸುರು ಬಣ್ಣದ ಅನೇಕ ಹುಳಗಳು ಕಂಡುಬರುತ್ತವೆ. ಇವುಗಳ ಮೈಮೇಲೆ ಬಹಳ ರೋಣೆಗಳಿರುತ್ತವೆ. ಇವು ಎಲೆಗಳನ್ನೆಲ್ಲ ತಿಂದು ಬರೇ ದಂಟುಗಳನ್ನಷ್ಟೇ ಬಿಡುತ್ತವೆ. ಮನುಷ್ಯನ ಕೈಗೆ ಇವು ಹತ್ತಿದರೆ ಬಹಳ ತಿಂಡಿಯೂ ಉರಿಯೂ ಉಂಟಾಗುತ್ತವೆ. ಈ ಹುಳಗಳು ಮಳೆಗಾಲದ ಅಂತ್ಯದಲ್ಲಿ ಸಣ್ಣ ಸಣ್ಣ ಶಂಖದಂಥ ಕೋಶಗಳನ್ನು ಕಟ್ಟಿಕೊಂಡು ಮರದ ಬೊಡ್ಡೆಗಳ ಮೇಲೆ ಮುಂದಿನ ವರ್ಷದ ತನಕ ಜೀವಂತ ಇರುತ್ತವೆ. ಇವುಗಳಿಗೆ ಉಪಾಯ ವೇನಂದರೆ:

ಈ ಶಂಖಿದಂಥ ಕೋಶಗಳನ್ನೆಲ್ಲ ಆರಿಸಿ ನಾಶ ಮಾಡುವದು. ಈ ಹುಳಗಳು ಚಿಕ್ಕೂ, ಹುಣಸೆ, ಹಲಸು, ರಾಮಫಳ, ಅಶ್ವತ್ಥ ಮುಂತಾದ ಅನೇಕ ಮರಗಳ ಮೇಲೆ ಜೀವಿಸಬಲ್ಲವು. ಇವು ಬಹಳವಾದರೆ ಮಾವಿನ ಬೆಳೆಯೂ ಇತರ ಬೆಳೆಗಳೂ ಕಡಿಮೆ ಆಗಬಹುದು.

೪. ಗಂಟು ಬೆಳೆಯುವದು :—ಮಲೆನಾಡಿನಲ್ಲಿ ಮಾವಿನ ಮರಗಳ ಟಿಸಿಲುಗಳ ಸಂದಿನಲ್ಲಿ ಹೊರಗಿನ ತೊಗಟೆಯು ಒಂದರ ಮೇಲೊಂದು ಥರವಾಗಿ ಕೂತು ಗಂಟಾದಂತೆ ತೋರುವದುಂಟು ಈ ರೋಗದಿಂದ ಮರಗಳಿಗೆ ಹೆಚ್ಚಿನ ಅಪಾಯವಾದದ್ದು ಕಂಡುಬರುವದಿಲ್ಲ.

೫. ಪೊಳ್ಳು ಅಥವಾ ಹೊದರು :—ಹಳೇ ಮಾವಿನ ಮರಗಳಲ್ಲಿ ಸಣ್ಣ ದೊಡ್ಡ ಪೊಳ್ಳುಗಳುಂಟಾಗಿ ದೊಡ್ಡ ದೊಡ್ಡ ಟೊಂಗೆಗಳೂ ಮೋಟವೂ ಅಶಕ್ತವಾಗಿ ಗಾಳಿಯ ಜೋರಿಗೆ ಮುರಿದು ಬೀಳುವದನ್ನು ನೋಡಬಹುದು. ಇದಕ್ಕೆ ಉಪಾಯವೇನೆಂದರೆ ಪೊಳ್ಳಿನೊಳಗಿನ ಸತ್ತ ಭಾಗವನ್ನೆಲ್ಲ ಹೆರಿಸಿ ತೆಗೆದು, ಡಾಂಬರವನ್ನು ಲೇಪಿಸಬೇಕು ಬಳಿಕ ಗೋಡೆ ಕಟ್ಟಲಿಕ್ಕೆ ಉಪಯೋಗಿಸುವ ಸುಣ್ಣಮಣ್ಣುಗಳ ಮಿಶ್ರಣವನ್ನು ಪೊಳ್ಳಿನಲ್ಲಿ ತುಂಬಿ, ಅದರ ಬಾಯಿಗೆ ಸಿಮೆಂಟಿನ ನುಣುಪಾದ ಗಿಲಾಯವನ್ನು ಮಾಡತಕ್ಕದ್ದು. ಪೊಳ್ಳು ಬಹು ದೊಡ್ಡದಾಗಿದ್ದರೆ ಅದರಲ್ಲಿ ಸುಣ್ಣ ಮಣ್ಣುಗಳೊಡನೆ ಇಟ್ಟಿಗೆಗಳನ್ನೂ ಕಲ್ಲುಗಳನ್ನೂ ಸಹ ತುಂಬಬಹುದು. ಬಾಯಲ್ಲಿ ಗಿಲಾಯ ಮಾಡುವಾಗ ಸುತ್ತಲಿನ ಜೀವಂತ ಮರದ ಭಾಗವನ್ನು ತೆರೆದಿಡಬೇಕು. ಇದರಿಂದ ಮರವು ಕಾಲಾಂತರದಲ್ಲಿ ಬೆಳೆದು ಗಿಲಾಯದ ಭಾಗವನ್ನೆಲ್ಲ ಮುಚ್ಚಿಕೊಳ್ಳುತ್ತದೆ

ಇದಲ್ಲದೆ ಪೊಳ್ಳುಗಳೇ ಉಂಟಾಗದಂತೆ ಎಚ್ಚರಪಡುವದು ಲೇಸು. ಮರಗಳ ಟೊಂಗೆಗಳು ಮುರಿದರಾಗಲಿ ಅವುಗಳನ್ನು ಕಡಿದರಾಗಲಿ ಕೂಡಲೆ ಸ್ವಚ್ಛವಾಗಿ ಆ ಬಾಗವನ್ನು ಕೆತ್ತಿ ಡಾಂಬರವನ್ನು ಲೇಪಿಸಬೇಕು. ಮತ್ತು ಟೊಂಗೆಗಳ ಸಂದಿನಲ್ಲಿ ನೀರು ನಿಲಸದಂತೆ ನೋಡಿಕೊಳ್ಳಬೇಕು.

ವಿಜಾಪೂರದಲ್ಲಿ ಡಿಸ್ಟ್ರಿಕ್ಟ ಜಜ್ಜರ ಬಂಗಲೆಯಲ್ಲಿ ಹಳೇಕಾಲದ ಮರವೊಂದುಂಟು ಹಿಂದೆ ಆದಿಲಶಾಹೀ ಮನೆತನದ ಅರಸರು ಈ ಮರದ ಟೊಂಗೆಗಳಿಗೆ ಅಪರಾಧಿಗಳನ್ನು ಗಲ್ಲಿಗೇರಿಸುತ್ತಿದ್ದರಂತೆ! ಈ ಮರದ ಬೊಡ್ಡೆಯಲ್ಲಿ ಬಹು ದೊಡ್ಡ ಪೊಳ್ಳುಂಟಾಗಿ ಮರವು ಮುರಿದು ಬೀಳುವಂತಾಗಿತ್ತು. ಈ ಪೊಳ್ಳನ್ನು ಮೇಲೆ ಹೇಳಿದಂತೆ ತುಂಬಿ ಗಿಲಾಯ ಮಾಡಲಾಗಿ, ಈಗ ಮರವು ಪುನರುಜ್ಜೀವನ ಹೊಂದಿ ನಿರೋಗಿಯಾಗಿ ಬೆಳೆಯುತ್ತಿರುವದನ್ನು ನೋಡ ಬಹುದು.

೬. **ಬಾಂದಳಕಗಳು :**—ಮಾವಿನ ಮರಗಳ ಟೊಂಗೆಗಳ ಮೇಲೆ ಬಾಂದಳಕಗಳೆಂಬ ಪರಾನ್ನಜೀವಿಗಳಾದ ವನಸ್ಪತಿಗಳು ಬೆಳೆಯುತ್ತಿರುವದನ್ನು ಸುಲಭವಾಗಿ ನೋಡಬಹುದು. ಇವುಗಳಿಗೆ ಬದನಿಕೆ, ಬೆಂಡೂಕ, ಮುಡುಕ ಎಂತಲೂ ಹೆಸರುಗಳುಂಟು. ಈ ವನಸ್ಪತಿಗಳ ಹಣ್ಣುಗಳನ್ನು ಪಕ್ಷಿಗಳು ತಿಂದು ಮಾವಿನ ಮರಗಳ ಮೇಲೆ ತಮ್ಮ ಮಲದೊಡನೆ ಅವುಗಳ ಬೀಜಗಳನ್ನು ಬಿಡುತ್ತವೆ. ಬೀಜಗಳು ಅಂಕುರಿಸಿ ಸಸಿಗಳುಂಟಾಗಿ, ಮಾವಿನ ಮರದ ಟೊಂಗೆಗಳೊಳಕ್ಕೆ ಅವು ತಮ್ಮ ಬೇರುಗಳನ್ನು ಸೇರಿಸಿ, ಮಾವಿನ ಮರದಲ್ಲಿ ಹರಿದಾಡುವ ರಸವನ್ನೆಲ್ಲ ಶೋಷಿಸಿಕೊಂಡು ಬೆಳೆಯುತ್ತವೆ. ಇದರಿಂದ ಮಾವಿನ ಮರದ ಟೊಂಗೆಗಳಿಗೆ ಸಾಕಷ್ಟು ಅನ್ನವು ದೊರೆಯದೆ ಅವುಗಳ ಬೆಳವಣಿಗೆಯು ಕುಂದುತ್ತದೆ. ಬಾಂದಳಕದಿಂದ ಮಾವಿನ ಮರಗಳೂ ಇನ್ನೂ ಅನೇಕ ಉತ್ತಮ ವೃಕ್ಷಗಳೂ ನಾಶವಾಗುತ್ತವೆ. ಪ್ರತಿವರ್ಷ ಈ ಬಾಂದಳಕಗಳನ್ನೆಲ್ಲ ಬೇರುಸಹಿತ ಕಡಿದುಹಾಕಿ ಮಾವಿನ ಮರಗಳನ್ನು ಉಳಿಸಿಕೊಳ್ಳಬೇಕು. ಬಾಂದಳಕಗಳಲ್ಲಿ ಅನೇಕ ಜಾತಿಗಳುಂಟು. ಅವುಗಳಲ್ಲಿ ಹೂವು ಕಾಯಿಗಳು ಆಗುವ ಮೊದಲೇ ಅವನ್ನೆಲ್ಲ ಕಡಿಯುವದುತ್ತಮ.

೭. **ಅಲಿಂಬಗಳು :**—ಮಾವಿನ ಮರಗಳ ತೊಗಟೆಯ ಮೇಲೆ ಕಪ್ಪು ಮತ್ತು ಬಿಳೀ ವರ್ಣದ ಮಖಮಲಿನಂತೆ ಮಿದುವಾದ ಅಲಿಂಬ ವನಸ್ಪತಿಗಳು ಬೆಳೆಯುತ್ತವೆ. ಇವು ಮುಖ್ಯವಾಗಿ ಮಾವಿನ ಮರಗಳ ತೊಗಟೆಯ ಸತ್ತಭಾಗದ ಮೇಲೆ ಬೆಳೆಯುತ್ತವೆ. ಇವುಗಳಿಂದ ಅಪಾಯವೇನೂ ಇಲ್ಲ. ಆದಾಗ್ಯೂ ಇಡೀ ಮರವನ್ನು ಮುಚ್ಚಿಬಿಡುವಷ್ಟು ಇವು ಬೆಳೆದರೆ, ಮರಕ್ಕೆ ಅತ್ಯವಶ್ಯವಾದ ಬೇಕೂ ಹವೆಯೂ ದೊರೆಯುವದಿಲ್ಲ. ಅದರಿಂದ ಅವುಗಳ ಬೆಳವಣಿಗೆಯು ಕುಂದಿ ಹಾನಿಯಾಗಬಹುದು. ಸಾಮಾನ್ಯವಾಗಿ ಹಾಳಿಗೆ ಬಿದ್ದ ತೋಟಗಳ ಮರಗಳ ಮೇಲೆ ಇವುಗಳನ್ನು ಹೆಚ್ಚಾಗಿ ಕಾಣಬಹುದು. ಸರಿಯಾಗಿ ಗೊಬ್ಬರ ನೀರುಗಳು ದೊರೆತು ಜೋರಿನಿಂದ ಬೆಳೆಯುತ್ತಿರುವ ಮರಗಳ ಮೇಲೆ ಇವು ಕಡಿಮೆ. ಧಾರವಾಡ ಶಹರದ ಸುತ್ತುಮುತ್ತಲಿನ ಅನೇಕ ತೋಟಗಳಲ್ಲಿ ಈ ಅಲಿಂಬಗಳು ಗಿಡಗಳನ್ನೆಲ್ಲ ಮುಚ್ಚಿರುವದನ್ನು ಕಾಣಬಹುದು. ಇಂಥ ತೋಟಗಳ ಸ್ಥಿತಿಯನ್ನು ಬೇರೆ ಬರೆಯ ಬೇಕಾದುದಿಲ್ಲ.

೮. **ಹಣ್ಣಿನಲ್ಲಾಗುವ ಹುಳಗಳು :**—ಮಾವಿನ ಕಾಯಿಗಳು ಬೆಳೆದು ಹಣ್ಣಿಗೆ ಬರುವಾಗ, ಒಂದು ತರದ ನೊಣವು ಅವುಗಳ ಸಿಪ್ಪೆಯನ್ನು ಚುಚ್ಚಿ ಒಳಗೆ ತತ್ತಿಗಳನ್ನಿಡುತ್ತದೆ. ತತ್ತಿಗಳು ಒಡೆದು ಹುಳಗಳು ಹೊರ ಬೀಳುತ್ತವೆ. ಮತ್ತು ಒಳಗಿನ ಗುಳವನ್ನು ತಿಂದು ಬೆಳೆಯುತ್ತವೆ. ಇದರಿಂದ ಹಣ್ಣು ಕಾಯಿಗಳು ಉದುರುತ್ತವೆ. ಬೆಳೆದ ಹುಳಗಳು ತಮ್ಮ ಕೋಶಾವಸ್ಥೆಯನ್ನು ನೆಲದಲ್ಲಿ

ಕಳೆಯುತ್ತವೆ. ಇದಕ್ಕೆ ಔಷಧಗಳೇನೂ ಇಲ್ಲ. ಮರದ ಕೆಳಗೆ ಬಿದ್ದ ಹಣ್ಣು ಕಾಯಿಗಳನ್ನೆಲ್ಲ ಕೂಡಿಸಿ ನದಿಯಲ್ಲಿ ಬಿಸುಡಬೇಕು ಅಥವಾ ನೆಲದಲ್ಲಿ ಆಳವಾದ ಕುಣಿಯನ್ನು ತೆಗೆದು ಹೂಳಬೇಕು.

೯. **ಮೊಸರು ರೋಗ :**—ಮಾವಿನ ಹಣ್ಣುಗಳೊಳಗೆ ಗುಳದ ಕೆಲವು ಭಾಗವು ಮಾತ್ರ ಕೊಳೆತು ಬಿಳೇ ಬಣ್ಣದ್ದಾಗಿ ಮೊಸರಿನ ಗುಳಿಗೆಗಳಂತೆ ಕಾಣು ತ್ತದೆ. ಈ ರೋಗವು 'ಆಸ್ಪರ್ಜಿಲ್ಲಸ್' ಎಂಬ ಒಂದು ಅಲಿಂಬದಿಂದ ಹುಟ್ಟು ತ್ತದೆ. ಆಪೂಸ ಜಾತಿಯ ಹಣ್ಣುಗಳಲ್ಲಿ ಇದು ಬಹಳ. ಪಾಯರೀ ತೋತಾ ಪುರೀ ಜಾತಿಗಳಲ್ಲಿಯೂ ಈ ರೋಗವು ಆಗಿವದು. ಹಣ್ಣುಗಳ ಹೊರಬದಿಯಿಂದ ಈ ರೋಗವನ್ನು ತಿಳಕೊಳ್ಳುವದು ಸುಲಭವಲ್ಲ ಹಣ್ಣುಗಳನ್ನು ತಿನ್ನಲಿಕ್ಕೆಂದು ಕೊಯ್ದ ಬಳಿಕ ಇದು ಕಂಡುಬರುವದು. ರೋಗವಾದ ಹಣ್ಣುಗಳು ರೋಗವಾ ಗದ ಹಣ್ಣುಗಳಿಂತ ಹಗುರಾಗಿರುತ್ತವೆಂದು ಅನ್ನುತ್ತಾರೆ ಬೆರಳಿನಿಂದ ಸಿಡಿದರೆ ಡಬ್ ಡಬ್ ಎಂಬ ಸಪ್ಪಳವಾಗುತ್ತಗೆ. ಈ ರೋಗಕ್ಕೆ ಉಪಾಯವು ಇನ್ನೂ ದೊರೆತಿಲ್ಲ.

೧೦. **ಫಲ ಹಿಡಿಯದಿರುವದು :**—ಮಾವಿನ ಮರಗಳು ಫಲ ಹಿಡಿಯ ದಿರುವದಕ್ಕೆ ಕೆಲವು ಕಾರಣಗಳುಂಟು ಸಾಮಾನ್ಯವಾಗಿ ಕೊಡಿಕಟ್ಟಿದ ಮರಗಳು ನಾಲ್ಕೈದು ವರ್ಷಗಳಲ್ಲಿಯೂ, ಗೊರಟೆಯಿಂದಾದವು ಎಂಟು ಹತ್ತು ವರ್ಷಗಳಲ್ಲಿಯೂ ಫಲಕ್ಕೆ ಬರುತ್ತವೆ. ಈ ವಯಸ್ಸಾದರೂ ಫಲ ಬರದಿದ್ದರೆ ಇಲ್ಲವೆ ಹೂಬಿಟ್ಟರೂ ಮಿಡಿ ಕಾಯಿಗಳು ಉದುರಿ ಹೋಗುತ್ತಿದ್ದರೆ, ಗಿಡಗಳ ಆರೈಕೆಯು ಚನ್ನಾಗಿ ಆಗು ತ್ತಿರುವದಿಲ್ಲವೆಂದು ತಿಳಿಯಬಹುದು. ಇಂಥಲ್ಲಿ ಸರಿಯಾಗಿ ಗೊಬ್ಬರ ನೀರುಗ ಳನ್ನು ಪೂರೈಸಿ ಕೊಟ್ಟರೆ ಮುಂದಿನ ವರ್ಷ ಫಲಗಳು ಬರಬಹುದು. ಕೆಲವು ಕಡೆ ಗಳಲ್ಲಿ ಇಂಥ ಮರಗಳ ಬೊಡ್ಡೆಯ ಸುತ್ತಲೂ ಐದಾರು ಫೂಟುಗಳ ಅಂತರದಲ್ಲಿ ಸಣ್ಣ ಕಾವಲಿಯನ್ನು ತೋಡಿ ಅದರಲ್ಲಿ ಬಂದ ಸಣ್ಣ ಬೇರುಗಳನ್ನೆಲ್ಲ ಕಡಿದು, ಕಾವಲಿಯಲ್ಲಿ ಗೊಬ್ಬರ ಮಣ್ಣುಗಳ ಮಿಶ್ರಣವನ್ನು ತುಂಬಿ ಮುಚ್ಚುವದರಿಂದ ಮರಗಳು ಫಲಬಿಟ್ಟ ಉದಾಹರಣೆಗಳುಂಟು. ಇದನ್ನು ಮಳೆಗಾಲದ ಆರಂಭದಲ್ಲಿ ಮಾಡಬೇಕು ನೆಲದ ಅಡಿಗೆ ಎರಡು ಮೂರು ಫೂಟುಗಳಲ್ಲಿ ಬಿರುಸಾದ ಕಲ್ಲಿದ್ದರೆ ಯಿದ್ದರೂ ಮರಗಳ ಬೆಳವಣಿಗೆಯು ಕುಂದಿ ಫಲ ಬರುವದಿಲ್ಲ. ಇದಕ್ಕೆ ಉಪಾ ಯವೇನೂ ಇಲ್ಲ. ಇಂಥ ನಲದಲ್ಲಿ ಗಿಡಗಳನ್ನೇ ಹಚ್ಚಬಾರದು.

## ಭಾಗ ೧ : ಸಮಾಪ್ತ.



# ಈ ಪುಸ್ತಕವನ್ನು ಬರೆಯುವಾಗ
# ಉಪಯೋಗಿಸಲ್ಪಟ್ಟ ಇತರ ಬರಹಗಳು

---

೧. ಫಳಝಾಡಾಂಚಾ ಬಾಗ (ಮರಾಠಿ), ಎರಡನೆಯ ಆವೃತ್ತಿ
ಲೇಖಕರು.—ಹರಿ ಪುರುಷೋತ್ತಮ ಪರಾಂಜಪೆ.

೨. ದಿ ಬುಕ್ ಆಫ್ ದಿ ಮ್ಯಾಂಗೋ (ಇಂಗ್ಲೀಷ್),
ಲೇಖಕರು —ಡಬ್ಲ್ಯೂ. ಬರ್ನ್ಸ್ ಮತ್ತು ಎಸ್. ಎಚ್. ಪ್ರಯಾಗ

೩. ಕಲಮೀ ಆಂಬ್ಯಾಚೆ ವ್ಯಾಪಾರೀ ಲಾಗವಡ (ಮರಾಠಿ),
ಲೇಖಕರು:—ಪಾಂಡುರಂಗ ಗೋವಿಂದ ಜೋಶಿ.

೪. ಹಣ್ಣುಹಂಪಲಗಳ ಬಾಗಾಯತವು,
ಲೇಖಕರು —ಶಂಭು ಶಂಭು ಭಟ್ಟ.

೫. ಮುಂಬಯಿ ಇಲಾಖೆಯ ಬೇಸಾಯ ಖಾತೆಯ
(ಅ) ವಾರ್ಷಿಕ ವರದಿಗಳು,
(ಬ) ಬುಲೆಟಿನ್ನುಗಳು,
ಮತ್ತು (ಕ) ಹಸ್ತ ಪತ್ರಿಕೆಗಳು.

೬. ಮುಂಬಯಿ ಇಲಾಖೆಯ ಜನಸಂಖ್ಯೆಯ ವರದಿ.

---

# ತಾರಾಮತಿ ಮತ್ತು ಕಂಪನಿ

## ಪುಣೆ ನಂ. ೨

## ಇವರಲ್ಲಿ ಸಿಗುವವು !

---

೧. **ಉತ್ತಮ ತಾಜಾ ನಿಂಬೆ ರಸ :**

ಒಳ್ಳೇ ಜಾತಿಯ ಚಿಕ್ಕ ನಿಂಬೆಯ ರಸವನ್ನು ತೆಗೆದು ಶಾಸ್ತ್ರೋಕ್ತ ರೀತಿಯಿಂದ ಬಾಟಲಿಗಳಲ್ಲಿ ಕೆಡದಂತೆ ತುಂಬಿಟ್ಟದ್ದು ! ಬೇಸಿಗೆಯಲ್ಲಿ ನಿಂಬೆ ಕಾಯಿಗಳು ದೊರೆಯದಿದ್ದಾಗ ಶರ್ಬತ್ತು ಪಾನಕಗಳನ್ನು ಮಾಡಲಿಕ್ಕೂ, ಯಾವಾಗಲೂ ಅಡಿಗೆಯಲ್ಲಿ ಉಪಯೋಗಿಸಲಿಕ್ಕೂ ಉತ್ತಮ. ವ್ಯಾಪಾರಿಗಳಿಗೆ ಸುಲಭ ದರ. ೨೪ ಔನ್ಸುಗಳ ಬಾಟಲಿ ೧ ಕ್ಕೆ ೧। ರೂಪಾಯಿ ಮಾತ್ರ. ಟ. ಖ. ಬೇರೆ

೨. **ಜಾಂಬೂಲೇಟ ಗುಳಿಗೆಗಳು :**

ಒಳ್ಳೇ ಜಾತಿಯ ನೇರಲ ಹಣ್ಣಿನಿಂದ ತಯಾರಿಸಿದ ಈ ಗುಳಿಗೆಗಳ ಸೇವನೆಯಿಂದ ಬಹು ಮೂತ್ರ, ಇಲ್ಲವೆ ಮಧುಮೇಹ ಎಂಬ ರೋಗವು ವಾಸಿಯಾಗುವದು. ೫೦ ಗುಳಿಗೆಗಳ ಬಾಟಲಿ ೧ ಕ್ಕೆ ೧ ರೂಪಾಯಿ ಮಾತ್ರ. ಟ. ಖ. ಬೇರೆ

೩. **ಕಾಂಬಿನೇಶನ್ ಲಾಯಿಮ್ ಜ್ಯೂಸ ಪ್ರೆಸ್** ಎಂಬ ನಿಂಬೆ ಕಾಯಿಗಳ ರಸವನ್ನು ತೆಗೆಯುವ ಸಾದಾ ಯಂತ್ರವು ಬೆಲೆ ೫೦ ರೂಪಾಯಿಗಳು.

ಹೆಚ್ಚಿನ ಮಾಹಿತಿ ಪತ್ರದ್ವಾರಾ

---